# ಶ್ರೀ ರಾಮಾಯಣ ದರ್ಶನಂ:
# ಸ್ತ್ರೀ ಪಾತ್ರಗಳ ಮನೋಭೂಮಿಕೆ



ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ
ಸಾದರಪಡಿಸಿದ ನಿಬಂಧ



ಸಂಶೋಧಕಿ
ಉಮ ಬಿ.ಎಂ.

ಮಾರ್ಗದರ್ಶಕರು
ಡಾ. ಟಿ. ವೆಂಕಟೇಶಮೂರ್ತಿ
ಮುಖ್ಯಸ್ಥರು, ಕನ್ನಡ ವಿಭಾಗ
ಬಿ.ಇ.ಎಸ್. ಪದವಿ ಸಂಜೆ ಕಾಲೇಜು,
ಜಯನಗರ, ಬೆಂಗಳೂರು-11







ಕಾವ್ಯಮಂಡಲ

ಬೆಂಗಳೂರು
೨೦೦೭

# ಶ್ರೀ ರಾಮಾಯಣ ದರ್ಶನಂ: ಸ್ತ್ರೀ ಪಾತ್ರಗಳ ಮನೋಭೂಮಿಕೆ

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ
ಸಾದರಪಡಿಸಿದ ನಿಬಂಧ

**ಸಂಶೋಧಕಿ**
ಉಮ ಬಿ.ಎಂ.



**ಮಾರ್ಗದರ್ಶಕರು**
ಡಾ. ಟಿ. ವೆಂಕಟೇಶಮೂರ್ತಿ
ಮುಖ್ಯಸ್ಥರು, ಕನ್ನಡ ವಿಭಾಗ
ಬಿ.ಇ.ಎಸ್. ಪದವಿ ಸಂಜೆ ಕಾಲೇಜು,
ಜಯನಗರ, ಬೆಂಗಳೂರು–11








ಕಾವ್ಯಮಂಡಲ
(ಹಂಪಿಯ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿರುವ ಸಂಸ್ಕೃತಿ ಅಧ್ಯಯನ ಕೇಂದ್ರ)

ಬೆಂಗಳೂರು
೨೦೦೭

# ಪ್ರಮಾಣ ಪತ್ರ

**ಶ್ರೀ ರಾಮಾಯಣ ದರ್ಶನಂ: ಸ್ತ್ರೀ ಪಾತ್ರಗಳ ಮನೋಭೂಮಿಕೆ** ಎಂಬ ಶೀರ್ಷಿಕೆಯ ನಿಬಂಧವನ್ನು ಡಾ.ಟಿ.ವೆಂಕಟೇಶಮೂರ್ತಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿರುವ ಕಾವ್ಯಮಂಡಲ ಅಧ್ಯಯನ ಸಂಸ್ಥೆಗೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಈ ನಿಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ :

ಸ್ಥಳ : ಬೆಂಗಳೂರು

ಉಮ. ಬಿ. ಎಂ.
**ಸಂಶೋಧಕಿ**

# ದೃಢೀಕರಣ ಪತ್ರ

ಉಮ. ಬಿ. ಎಂ ಇವರು **ಶ್ರೀ ರಾಮಾಯಣ ದರ್ಶನಂ: ಸ್ತ್ರೀ ಪಾತ್ರಗಳ ಮನೋಭೂಮಿಕೆ** ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿರುವ ಕಾವ್ಯಮಂಡಲ ಅಧ್ಯಯನ ಸಂಸ್ಥೆಗೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಈ ನಿಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ :

ಸ್ಥಳ : ಬೆಂಗಳೂರು

**ಡಾ. ಟಿ. ವೆಂಕಟೇಶಮೂರ್ತಿ**
ಮುಖ್ಯಸ್ಥರು, ಕನ್ನಡ ವಿಭಾಗ,
ಬಿ.ಇ.ಎಸ್. ಪದವಿ ಸಂಜೆ ಕಾಲೇಜು,
ಜಯನಗರ, ಬೆಂಗಳೂರು

# ಪರಿವಿಡಿ

# ಅಧ್ಯಾಯ – 1

## ಅಧ್ಯಯನದ ಉದ್ದೇಶ ಮತ್ತು ಸ್ವರೂಪ

ಭಾರತೀಯ ಪರಂಪರೆಯಲ್ಲಿ ಸ್ತ್ರೀಗೆ ಯಾವುದೇ ಪ್ರಮುಖ ಸ್ಥಾನವನ್ನು ಕೊಟ್ಟಿರದೆ, ಸ್ತ್ರೀಯನ್ನು ಎರಡನೇ ದರ್ಜೆಯ ಪ್ರಜೆಯಂತೆ ಕಂಡಿರುವುದು ಸತ್ಯವಾಗಿದೆ. ಹೆಣ್ಣಿಗೆ ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕವಾಗಿ ಈ ಯಾವ ಕ್ಷೇತ್ರಗಳಲ್ಲೂ ಸ್ವಾತಂತ್ರ್ಯವಿಲ್ಲದೆ ಎಲ್ಲ ರೀತಿಯ ಸ್ವಾತಂತ್ರ್ಯಗಳು ಪುರುಷನಿಗಷ್ಟೇ ಸೀಮಿತವಾಗಿದ್ದವು. ಲಿಂಗವ್ಯವಸ್ಥೆಯ ಸ್ವರೂಪವು ವಿಭಿನ್ನ ಸ್ತರಗಳಿಂದ ಹಾಗೂ ಆಯಾಮಗಳಿಂದ ನಿರ್ಮಿತಗೊಂಡಿದ್ದಾಗಿದೆ. ಸ್ತ್ರೀ ಅಸಮಾನತೆ ಎನ್ನುವುದು ಆಯಾ. ದೇಶ, ಕಾಲ, ಸಂಸ್ಕೃತಿ ಇವುಗಳೆಲ್ಲವನ್ನು ಪ್ರಭಾವಿಸಿ ವಿಭಿನ್ನ ಸ್ವರೂಪವನ್ನು ಪಡೆದಿದೆ. ಪುರುಷ ಪ್ರಧಾನ ವ್ಯವಸ್ಥೆಯು ಬಹಳ ಹಿಂದಿನಿಂದಲೂ ಹೆಣ್ಣನ್ನು ಅತ್ಯಂತ ನಿಕೃಷ್ಟವಾಗಿ ನಡೆದುಕೊಂಡು ಬಂದಿದೆ. ಈ ರೀತಿಯಲ್ಲಿ ಸ್ತ್ರೀಯು ಲಿಂಗನೆಲೆಯಲ್ಲಿ ಶೋಷಣೆಗೆ ತುತ್ತಾಗಿದ್ದಾಳೆ. ಈ ಎಲ್ಲ ಸಮಸ್ಯೆಗಳನ್ನು ಸ್ತ್ರೀವಾದ ಎತ್ತಿ ಹಿಡಿಯುತ್ತದೆ.

ಭಾರತೀಯ ಸಂಸ್ಕೃತಿಯನ್ನು ಪ್ರಾಯ್ಡಿಯನ್ ದೃಷ್ಟಿಕೋನದಿಂದ ವಿಶ್ಲೇಷಿಸಿದ ಫಿಲಿಫ್‌ಸ್ಪ್ರಾಟ್ ಎಂಬ ವಿದ್ವಾಂಸರ "ತಾಯಿತತ್ವ ಭಾರತೀಯ ಸಂಸ್ಕೃತಿಯ ಆಧಾರ ಸ್ತಂಭಗಳಲ್ಲೊಂದು"[1] ಎಂದು ಹೇಳುತ್ತಾರೆ. "ಭಾರತೀಯ ಮನಸ್ಸಿನ ಮೇಲೆ ಅತ್ಯಂತ ಆಳವಾದ ಪರಿಣಾಮ ಬೀರುವ ಈ ತತ್ವದ ಅಭಿವ್ಯಕ್ತಿಯನ್ನು ಭಾರತೀಯ ಬದುಕಿನ ಎಲ್ಲ ಮುಖಗಳಲ್ಲೂ ಕಾಣಬಹುದಾಗಿದೆ. ಧರ್ಮ ಮತ್ತೆ ಕಲೆಗಳಲ್ಲಿ ಈ ತಾಯಿ ತತ್ವ ಎಂಬುದು ಒಂದು ರೀತಿಯ ಮೂಲ ಪ್ರತಿಮೆಯಾಗಿ ಹೋಗಿದೆ. ಭಾರತೀಯ ಮನಸ್ಸು ಅತ್ಯಂತ ಉತ್ಕಟವಾಗಿ ಪ್ರತಿಸ್ಪಂದಿಸುವುದು ಈ ತಾಯಿ ತತ್ವದ ವಿವಿಧ ಅಭಿವ್ಯಕ್ತಿಗಳಿಗೆ"[2] ಎಂಬುದನ್ನು ಗುರುತಿಸುತ್ತಾರೆ.

ನಮ್ಮ ಸಂಸ್ಕೃತಿಯಲ್ಲಿ, ನಮ್ಮ ಸಮಾಜದ ಮನೋಭಿತ್ತಿಯಲ್ಲಿ ಮಹಿಳೆಯ ಸಹಜ ಸ್ವಭಾವ ಗುಣಗಳನ್ನು ಕುರಿತಂತೆ ಹಲವು ರೂಢಿಗತ ಗ್ರಹಿಕೆಗಳು ನೆಲೆಗೊಂಡು ಬಿಟ್ಟಿದೆ. ಮಹಿಳೆ ಚಂಚಲೆ ದುರ್ಬಲ ಹಾಗೂ ಅಸ್ಥಿರ ಮನಸ್ಕಳು, ಆತ್ಮವಿಶ್ವಾಸದ ಕೊರತೆಯಿಂದ ಬಳಲುವವಳು, ಅಶಕ್ತಳು ಅವಳಲ್ಲಿ ಉತ್ಪಾದನಾ ಸಾಮರ್ಥ್ಯಕ್ಕಿಂತ ಪಾಲನಾ ಸಾಮರ್ಥ್ಯವೇ ಸಹಜಗುಣವಾಗಿದೆ ಎಂಬೆಲ್ಲ ಸ್ತ್ರೀಯನ್ನು ನಿರ್ವಚಿಸಿಕೊಂಡು ಬರಲಾಯಿತು. ಮೃದು, ಸಹನೆ, ತಾಳ್ಮೆ, ಸಂಚಲತೆ, ಭಾವುಕತೆ ಇವುಗಳು ಹೆಣ್ಣಿನ ಗುಣಗಳೆಂದೂ ಬಲ, ವಿಚಾರಶಕ್ತಿ, ಅಚಲತೆ, ಬುದ್ಧಿ ಈ ಗುಣಗಳು ಗಂಡಿನ ಸ್ವಭಾವವೆಂದು ನಮ್ಮ ಪರಂಪರೆ ನಿರ್ವಹಿಸುತ್ತ ಬಂದಿದೆ. ಅಂದರೆ "ಜೈವಿಕ ಸ್ವರೂಪಕ್ಕೂ, ವ್ಯಕ್ತಿತ್ವಕ್ಕೂ ಅಂತರ್‌ಸಂಬಂಧವನ್ನು ಕಟ್ಟುತ್ತದೆ. ವ್ಯಕ್ತಿತ್ವದ ಪ್ರಗತಿಯನ್ನು ಲಿಂಗ ಸಾಪೇಕ್ಷಗೊಳಿಸುವ ಜೈವಿಕವಾದವನ್ನು ಸ್ತ್ರೀವಾದವು ತಿರಸ್ಕರಿಸುತ್ತದೆ."[3] ಎಂದು ಗಾಯಿತ್ರಿ ನಾವಡ ಅವರು ತಿಳಿಸುತ್ತಾರೆ. ಸ್ತ್ರೀ ಪುರುಷರ ನಡುವೆ ಇರುವ ವ್ಯತ್ಯಾಸ ಅದು ನಿಸರ್ಗವಾದುದು. ಈ ಜೈವಿಕ ವ್ಯತ್ಯಾಸವನ್ನು ಪುರುಷ ಪ್ರಧಾನ ಸಮಾಜವು ಬಲವಂತವಾಗಿ ಸ್ತ್ರೀ ಅಶಕ್ತಳು ಎಂಬಂತೆ ನಡೆಸಿಕೊಂಡು ಬಂದಿದೆ. ಇದು ಪುರುಷ ತನ್ನ ಅಧಿಕಾರವನ್ನು ಸ್ಥಾಪಿಸಿಕೊಳ್ಳಲು

ನಡೆಸಿರುವ ತಂತ್ರವೆಂದು ಅರಿಯಬಹುದಾಗಿದೆ. ಹೀಗೆ ಲಿಂಗ ನೆಲೆಗಳಲ್ಲಿ ನಡೆಯುತ್ತಿರುವ ಈ ನಿರ್ಬಂಧ ಹೇರಿಕೆಯನ್ನು ಕನ್ನಡ ಸ್ತ್ರೀವಾದವು ಪ್ರತಿಭಟಿಸುತ್ತದೆ.

"ಸಾಮಾಜಿಕ ವಿಕಾಸದ ಫಲವಾಗಿ ಭಾರತೀಯ ಸಮಾಜದಲ್ಲಿ ಹೆಣ್ಣಿನ ಸ್ಥಾನಮಾನಗಳ ಬಗ್ಗೆ ಇದ್ದ ಧೋರಣೆಗಳು ಕನಿಷ್ಠ ಪಕ್ಷ ಸಿದ್ಧಾಂತಗಳ ಮಟ್ಟದಲ್ಲಿಯಾದರೂ ಬದಲಾವಣೆ ಹೊಂದುತ್ತಾ ಹೋದವು. ವಿದ್ಯಾಭ್ಯಾಸದಲ್ಲಿ ಸಮಾನ ಅವಕಾಶಗಳನ್ನು ಕೊಡಬೇಕೆನ್ನುವುದರಿಂದ ಹಿಡಿದು, ಹೆಣ್ಣಿಗೆ ಅನ್ಯಾಯವಾಗದ ಹಾಗೆ ಪುರುಷ ಪ್ರಧಾನ ಸಮಾಜದ ಒತ್ತಡಗಳಿಂದ ರೂಪಿತವಾಗಿರುವ ಹಲವಾರು ಸಾಮಾಜಿಕ ಸಂಸ್ಥೆಗಳ ವಿರುದ್ಧ ಪ್ರತಿಭಟನೆ ಯವರಿಗೆ ಈ ಬದಲಾವಣೆಯ ವ್ಯಾಪ್ತಿ"[4] ಇದೆ ಎಂದು ಹೆಚ್.ಎಸ್. ಆರ್. ರವರು ಗುರುತಿಸುತ್ತಾರೆ. ಇಂಗ್ಲೀಷ್ ವಿದ್ಯಾಭ್ಯಾಸದ ಕ್ರಮದಿಂದಾಗಿ ಸ್ತ್ರೀಯರೂ ಶಿಕ್ಷಣ ಪಡೆದು ಅವರ ಆಲೋಚನ ಕ್ರಮವೂ ಬದಲಾಯಿತು. ಪುರುಷ ಪ್ರಧಾನ ಸಮಾಜ ಪ್ರಶ್ನಿಸುವುದಕ್ಕೆ ಹಾಗೂ ತಮ್ಮ ಸ್ಥಿತಿಯನ್ನು ಅರಿತುಕೊಳ್ಳುವುದಕ್ಕೆ ಹೊಸ ಮಾರ್ಗವು ತೆರೆದುಕೊಂಡಿತು.

1920 ರಿಂದ ಗಾಂಧೀಜಿಯವರ ಸತ್ಯಾಗ್ರಹ ಹೋರಾಟ ಆರಂಭವಾಯಿತೆಂದು ಗುರುತಿಸಬಹುದು. ಅವರ ಪ್ರಮುಖ ಅಸ್ತಗಳೆಂದರೆ ಸತ್ಯ ಮತ್ತು ಅಹಿಂಸೆಗಳಾಗಿದ್ದವು. "ಗಾಂಧೀಜಿ ಸ್ತ್ರೀಯರನ್ನು ಅಹಿಂಸೆಯ ಪ್ರತೀಕವೆಂದು ತಿಳಿದಿದ್ದರು. ತಾಳ್ಮೆ ದೃಢತೆಗಳು ಹೆಚ್ಚು ಹೊಂದಿರುವ ಸ್ತ್ರೀಯರೇ ಪುರುಷರಿಗಿಂತ ಸತ್ಯಾಗ್ರಹ ಚಳುವಳಿಗಳಲ್ಲಿ ಜಯಗಳಿಸಬಲ್ಲರೆಂಬುದು ಅವರ ನಂಬಿಕೆಯಾಗಿತ್ತು. 'ನಾನು ತಾಯಿ, ಪತ್ನಿ, ಇವರಿಂದಲೇ ಸತ್ಯ ಅಹಿಂಸಾತತ್ವಗಳ ಸಾರವನ್ನು ಗ್ರಹಿಸಿದ್ದೇನೆ' ಎಂದು ಅನೇಕ ಸಲ ನುಡಿದಿದ್ದಾರೆ. ಸ್ತ್ರೀ ಅಬಲೆ, ಇವಳು ಪುರುಷನ ಆಶ್ರಯವಿಲ್ಲದೆ ಬಾಳಲಾರಳು ಎಂಬ ವಾದವನ್ನು ಗಾಂಧೀಜಿ ಒಪ್ಪಲಿಲ್ಲ. ಅವರ ಅಭಿಪ್ರಾಯದಲ್ಲಿ ಬಲಾಬಲಗಳು ಶಾರೀರಿಕವಾಗಿರುವುದಕ್ಕಿಂತ ಹೆಚ್ಚಾಗಿ ಮಾನಸಿಕ, ನೈತಿಕ ಮತ್ತು ದೈವಿಕ ಶಕ್ತಿಗಳಾಗಿದ್ದವು. ಸ್ತ್ರೀ ಭೀತಿಗೊಳಗಾದರೆ ಮಾತ್ರ ಅಬಲೆ, ಸಾಹಸದಿಂದ ಅತ್ಯಾಚಾರ, ಅನ್ಯಾಯಗಳನ್ನು ಎದುರಿಸಿದರೆ ಸಬಲೆಯಾಗುವಳು"[5] ಎಂಬ ತತ್ತ್ವವನ್ನು ಗಾಂಧೀಜಿ ಎತ್ತಿ ಹಿಡಿರು. ಗಾಂಧೀಜಿಯವರ ಪ್ರಭಾವದಿಂದ ಅನೇಕ ಮಹಿಳೆಯರು ರಾಜಕೀಯವನ್ನು ಪ್ರವೇಶಿಸಿ ಹೋರಾಟಕ್ಕೆ ಹೊಸ ತಿರುವನ್ನು ಕೊಟ್ಟರು. ಕಸ್ತೂರಿಬಾಯಿ, ಸರೋಜಿನಿನಾಯಿಡು, ಕಮಲಾನೆಹರು, ವಿಜಯಲಕ್ಷ್ಮಿಪಂಡಿತ್, ಮೀರಾಬೆನ್, ಕಮಲಾದೇವಿ ಚಟ್ಟೋಪಾಧ್ಯಾಯ ಮೊದಲಾದ ಸ್ತ್ರೀಯರು ಸ್ವತಂತ್ರ ಹೋರಾಟಕ್ಕೆ ಮಹತ್ತರ ಸೇವೆಯನ್ನು ಸಲ್ಲಿಸಿದ್ದಾರೆ.

ಆಧುನಿಕ ಪಾಶ್ಚಾತ್ಯ ಶಿಕ್ಷಣವು ಅಂಧಕಾರದಲ್ಲಿ ಇದ್ದ ಸ್ತ್ರೀಯರಿಗೆ ಮುಕ್ತಿಯನ್ನು ದೊರಕಿಸಿಕೊಟ್ಟಿತು. ರಾಜಾರಾಮ್ ಮೋಹನ್‌ರಾಯ್, ಈಶ್ವರಚಂದ್ರ ವಿದ್ಯಾಸಾಗರ್, ಸ್ವಾಮಿ ದಯಾನಂದ ಸರಸ್ವತಿ, ಸ್ವಾಮಿ ವಿವೇಕಾನಂದ ಇವರುಗಳ ಆದರ್ಶವು ಆತ್ಮವಿಮರ್ಶೆಯಡೆಗೆ ಕೊಂಡೊಯ್ಯಿತು. ಸಮಾಜದಲ್ಲಿ ಲೋಪದೋಷಗಳನ್ನು ಗುರುತಿಸಿ ಅವುಗಳಿಂದ ಬಿಡುಗಡೆಗೊಳಿಸುವ ಪ್ರಯತ್ನವು ನಡೆಯಿತು. "ಸಮಾಜದಲ್ಲಿ ಹಿಂದುಳಿದಿದ್ದ ಸ್ತ್ರೀಯರ ಪುನರುದ್ಧಾರದ ಕಾರ್ಯಕ್ರಮಕ್ಕೆ ಮೊಟ್ಟಮೊದಲ ಪ್ರಾಶಸ್ತ್ಯ

ಕೊಟ್ಟಾತ ರಾಜಾರಾಮ್ ಮೋಹನ್‌ರಾಯ್. ಪ್ರಾಚೀನ ಕಾಲದಲ್ಲಿ ಮಹಿಳೆಯರು ಹೊಂದಿದ್ದ ಹಕ್ಕುಗಳ ಮೇಲೆ ನಡೆದಿರುವ ವರ್ತಮಾನ ಕಾಲದ ಆಘಾತದ ಬಗೆಗೆ ಒಂದು ಸಂಕ್ಷಿಪ್ತ ವಿಮರ್ಶಾತ್ಮಕ ಪರಿಶೀಲನೆ" ಎಂಬ ಹೆಸರಿನಲ್ಲಿ ಈತನು ಪ್ರಕಟಿಸಿದ ಪ್ರಬಂಧವು ಸ್ತ್ರೀಯರ ಹಕ್ಕುಗಳ ಬಗೆಗೆ ಅಂದಿನ ಸಮಾಜ ಸುಧಾರಕರ ಉದಾರ ಮನೋಭಾವಕ್ಕೆ ಹಿಡಿದ ಕನ್ನಡಿಯಂತಿದೆ."[6]

ಮಹಿಳೆಯರಲ್ಲಿ ಪ್ರಥಮ ಮುಖಂಡರಾದ ಅನಿಬೆಸೆಂಟ್‌ರವರು ಸ್ತ್ರೀಯರಿಗೆ ಪ್ರೇರಕ ಶಕ್ತಿಯಾಗಿದ್ದರು. ಐರಿಶ್ ಮಹಿಳೆಯಾದ ಇವರು ಸ್ವತಂತ್ರಕ್ಕಾಗಿ ಭಾರತದ ಪರ ಹೋರಾಡಿ ಜೈಲಿಗೆ ಸೇರಿದುದು ಚಳುವಳಿಯನ್ನು ಇನ್ನಷ್ಟು ತೀವ್ರವಾಗಿಸಿತು. ಹೀಗೆ ಮಹಿಳೆಯರು ಹಂತ ಹಂತವಾಗಿ ಅಧಿಕಾರವನ್ನು ಪ್ರಶ್ನಿಸುವ ಹಾಗೂ ತಮ್ಮ ಹಕ್ಕು ಬಾಧ್ಯತೆಗಳಿಗೆ ಹೋರಾಡುವ ಧೈರ್ಯವನ್ನು ತಂದುಕೊಂಡು ಹೋರಾಟಕ್ಕಿಳಿದವರು.

"In the nineteenth century, the "Women question" loomed large. This was not a questions of 'what do women want?" but rather 'how can they be modernized". It became the central question in nineteenth century British India because the foreign rules had focused their attention on this particular aspect of society"[7] (Ge-valdine Forbes-1996-12) ಎಂದು ಡಾ॥ ಎಂ. ಉಷಾರವರು ಅನಿಬೆಸೆಂಟರ ಅಭಿಪ್ರಾಯವನ್ನು ಹೀಗೆ ಉಲ್ಲೇಖಿಸುತ್ತಾರೆ.

ಸ್ತ್ರೀವಾದವನ್ನು ಕುರಿತ ಹಲವು ವ್ಯಾಖ್ಯಾನಗಳನ್ನು ಸ್ತ್ರೀವಾದಿ ಚಿಂತಕರು ಹೀಗೆ ಮಂಡಿಸಿದ್ದಾರೆ.

"ಸ್ತ್ರೀವಾದ ಎಂದರೆ ಮೂಲಭೂತವಾಗಿ ಸಮಾಜದಲ್ಲಿನ ಸ್ತ್ರೀ ಶೋಷಣೆ ಹಾಗೂ ಗಮನವನ್ನು ಕುರಿತ ಪ್ರಜ್ಞಾಪೂರ್ವಕ ಎಚ್ಚರ. 'ಸ್ತ್ರೀ' ಯನ್ನು ಕುರಿತ ಗ್ರಹಿಕೆ, ವಿವರಣೆ, ವಿಶ್ಲೇಷಣೆ, ಪುನರ್ ಮೌಲ್ಯೀಕರಣ ಪ್ರಯತ್ನಕ್ಕೆ ಸೂಕ್ತವಾದ ತಾತ್ವಿಕತೆಯನ್ನು ಕಟ್ಟಿಕೊಳ್ಳುವ ಪ್ರಕ್ರಿಯೆಯೇ ಸ್ತ್ರೀವಾದ"[8] ವಾಗಿದೆ ಎಂಬುದು ಡಾ॥ ಪ್ರೀತಿ ಶುಭಚಂದ್ರ ಅವರ ಅಭಿಪ್ರಾಯ ವಾಗಿದೆ ಮುಂದುವರೆದು.

ಸಮಾಜದಲ್ಲಿ ಲಿಂಗಾಧಾರಿತ ಅಸಮಾನತೆಯಿದೆ ಎಂಬ ವಿಷಯದ ಬಗ್ಗೆ ಅರಿವನ್ನು ಮೂಡಿಸಿಕೊಂಡು ಸಮಾಜದ ವಿವಿಧ ಸಂಸ್ಥೆಗಳಲ್ಲಿ ಸ್ತ್ರೀಯರು ಎದುರಿಸುತ್ತಿರುವ ತಾರತಮ್ಯ, ದೌರ್ಜನ್ಯ ಹಾಗೂ ಶೋಷಣೆಗಳನ್ನು ಮನಗಂಡು, ಈ ಪ್ರವೃತ್ತಿಗಳನ್ನು ಕೊನೆಗಾಣಿಸಲು ನಡೆಸುವ ಎಲ್ಲ ಉದ್ದೇಶಿತ, ಪ್ರಾಮಾಣಿಕ ಪ್ರಯತ್ನಗಳನ್ನೂ ಸ್ತ್ರೀವಾದ ಎಂದು ಕರೆಯಬಹುದು ಎಂದು ಮತ್ತೊಂದು ಕಡೆ ಹೇಳಿದ್ದಾರೆ"[9]

"ಸ್ತ್ರೀವಾದ ಎನ್ನುವುದು ಒಂದು ಗಂಭೀರ ಚಿಂತನೆ. ಜೀವನ ಕ್ರಮ. ಪ್ರಾಮಾಣಿಕ ನಂಬಿಕೆ, ಪ್ರತಿಭಾವನಾತ್ಮಕ ಹೋರಾಟದ ತಾತ್ವಿಕತೆ"[10]. ಎಂಬುದು ಆರ್. ಇಂದಿರಾ ಅವರು ಹೇಳುತ್ತಾರೆ.

"ಸ್ತ್ರೀವಾದಿ ಓದುವಿಕೆ ಎಂಬುದು ರೋಲಾಬಾರ್ತ್ (Roland Barthes) ಪ್ರತಿಪಾದಿಸಿದ ಓದುವಿಕೆಯನ್ನು ಕುರಿತ ವಿಮರ್ಶಾ ಪರಿಕಲ್ಪನೆ ಮತ್ತು ಸ್ತ್ರೀವಾದ ಸಿದ್ಧಾಂತಗಳ ಒಂದು ಸಂಯುಕ್ತಪದವಾಗಿದೆ. ಪಶ್ಚಿಮದ ದೇಶಗಳಲ್ಲಿ ಮಹಿಳಾ ವಿಮೋಚನೆ ಚಳುವಳಿಗಳ ಪರಿಣಾಮವಾಗಿ ಹುಟ್ಟಿ ಬೆಳೆದಿರುವ ಸ್ತ್ರೀವಾದ ಚಿಂತನೆಯ ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಸ್ತ್ರೀ-ಪುರುಷರ ನಡುವಿನ ಅಧಿಕಾರದ ಸಂಬಂಧಗಳನ್ನು ಬದಲಾಯಿಸುವ ಗುರಿಯುಳ್ಳ ಒಂದು ರಾಜಕೀಯ ಹೋರಾಟದ ಸಿದ್ಧಾಂತವಾಗಿದೆ. ವರ್ಗ, ಜನಾಂಗಳಂತೆ ಲಿಂಗ ಪ್ರಭೇದ ಕೂಡ ಸಾಮಾಜಿಕವಾಗಿ ಕಟ್ಟಲ್ಪಟ್ಟಿರುತ್ತದೆ. ಸ್ತ್ರೀ-ಪುರುಷರ ನಡುವಿನ ಜೀವಶಾಸ್ತ್ರೀಯ ನೆಲೆಗಳು ಲೈಂಗಿಕ ವ್ಯತ್ಯಾಸಗಳು ಲಿಂಗ (Sex) ಎನಿಸಿದರೆ, ಸಾಮಾಜಿಕವಾಗಿ ಈ ಲಿಂಗಗಳ ಸುತ್ತ ರೂಪಗೊಂಡಿರುವ ಗುಣ, ಸ್ವಭಾವ ಲಕ್ಷಣ, ಶಕ್ತಿ, ಸಾಮರ್ಥ್ಯಾದಿಗಳ ಭಿನ್ನತೆಗಳು 'ಲಿಂಗ ಪ್ರಭೇದ' ವೆನಿಸುತ್ತವೆ."[11] ಹೀಗೆ ಸ್ತ್ರೀವಾದಿ ಅಧ್ಯಯನದಿಂದ ಶತಮಾನಗಳಿಂದ ಮುಸುಕು ಕಟ್ಟಿರುವ ಮಹಿಳೆಯರ ಅಸ್ತಿತ್ವವನ್ನು ಮತ್ತೆ ಸ್ಥಾಪಿಸುವ ಪ್ರಯತ್ನ ನಡೆಯಿತು. ಲಿಂಗತಾರತಮ್ಯ, ಪಿತೃಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿನ ನೆಲೆಯ ಸ್ವರೂಪ ಇವುಗಳನ್ನು ಸ್ತ್ರೀವಾದಿ ಅಧ್ಯಯನಗಳು ಚರ್ಚಿಸುತ್ತವೆ. ಪಶ್ಚಿಮದಲ್ಲಿ ಬೆಳೆದಿರುವ ಸ್ತ್ರೀವಾದಿ ವಿಮರ್ಶೆಯಲ್ಲಿ ಈ ವಿಚಾರಗಳು ಮುಖ್ಯ ಗುರಿಗಳಾಗಿದೆ. ಅಂಚಿಗೆ ಸರಿದಿರುವ ಸ್ತ್ರೀ ಗುಣಗಳಿಗೆ ಮೌಲಿಕತೆಯನ್ನು ಒದಗಿಸುವ ಪ್ರಯತ್ನವನ್ನು ಸ್ತ್ರೀವಾದ ಮಾಡುತ್ತಾ ಬಂದಿದೆ.

"1960 ರ ದಶಕದ ಉತ್ತರಾರ್ಧದಲ್ಲಿ ಪಶ್ಚಿಮದಲ್ಲಿ ಸಂಭವಿಸಿದ ಅಂತರಾಷ್ಟ್ರೀಯ ಮಹಿಳಾ ಚಳುವಳಿಯು ಮಹಿಳೆಯರ ರಾಜಕೀಯ, ಆರ್ಥಿಕ, ಹಕ್ಕುಗಳು, ಜನಾಂಗೀಯ ಗುಲಾಮಗಿರಿಯ ಪದ್ಧತಿ ಮುಂತಾದ ಧ್ಯೇಯವನ್ನು ಹೊಂದಿದ್ದು, ಈ ಚಳುವಳಿಯ ಕಾವಿನಿಂದ, ಸ್ತ್ರೀವಾದಿ ವಿಮರ್ಶೆಯು ಹುಟ್ಟಿತು. ಆರಂಭದ ಹಂತದಲ್ಲಿ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯು ಹುಟ್ಟಿತು. ಆರಂಭದ ಹಂತದಲ್ಲಿ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯು ಸಾಹಿತ್ಯದಲ್ಲಿನ ರೂಢಿಗತವಾದ ಸ್ತ್ರೀ ದ್ವೇಷದ ಅಂಶಗಳನ್ನು ಸ್ತ್ರೀಯರನ್ನು ದೇವತೆ ರಾಕ್ಷಸಿಯರ ಸಿದ್ಧ ಪ್ರತೀಕಗಳಲ್ಲಿ ಚಿತ್ರಿಸಿರುವುದನ್ನು ಶ್ರೇಷ್ಠ ಕೃತಿಗಳಲ್ಲೂ, ಜನಪ್ರಿಯ ಸಾಹಿತ್ಯದಲ್ಲೂ ಸಾಹಿತ್ಯಕವಾದ ಸ್ತ್ರೀ ನಿಂದನೆ, ಬೆದರಿಕೆ, ತಂತ್ರಗಳಿರುವುದನ್ನು ಬಯಲಿಗೆಳೆಯವತ್ತ ತನ್ನ ಗಮನವನ್ನು ಕೇಂದ್ರೀಕರಿಸಿತ್ತು"[12]. ಎಂದು ಡಾ|| ನರಹಳ್ಳಿ ಬಾಲಸುಬ್ರಮಣ್ಯಂ ಅವರು ಹೇಳುತ್ತಾರೆ.

ಭಾರತದ ಬದಲಾದ ಸಾಮಾಜಿಕ ಹಾಗೂ ಸಾಂಸ್ಕೃತಿ ಸಂದರ್ಭದಲ್ಲಿ ಪುರುಷನ ಶಕ್ತಿರಾಜಕಾರಣದ ಕೇಂದ್ರಗಳನ್ನು ಗುರುತಿಸುತ್ತಲೇ ಆ ವಲಯಗಳಿಗೆ ಮಹಿಳಾ ಪ್ರವೇಶಕ್ಕಾಗಿ ದನಿ ಎತ್ತಲಾಯಿತು. ಪುರುಷ ಶಕ್ತಿ ರಾಜಕಾರಣ ಕೇಂದ್ರಗಳ ಪ್ರಕ್ರಿಯೆಯಲ್ಲಿ ಮಹಿಳೆಯರು ತಮ್ಮ ಹಕ್ಕು, ಅಧಿಕಾರಕ್ಕಾಗಿ ಹೋರಾಟವನ್ನು ಆರಂಭಿಸಿದರು. ಲಿಂಗ ಸಮಾನತೆ ಎನ್ನುವುದು ಅಧಿಕಾರದ ಪ್ರಶ್ನೆಯೊಂದಿಗೆ ಅಂತರ್ ಸಂಬಂಧವನ್ನು ಹೊಂದಿದೆ ಎನ್ನುವ ಸತ್ಯವನ್ನು ಕಂಡುಕೊಳ್ಳಲಾಯಿತು. ಅಧಿಕಾರದ ಮರುಹಂಚಿಕೆಗೆ ಮಹಿಳಾವಾದಿಗಳು ಒತ್ತಾಯ ಮುಂದಿಟ್ಟು ಹೋರಾಟವನ್ನು ಆರಂಭಿಸಿದರು. ಪುರುಷ ಪ್ರಧಾನ ಕುಟುಂಬವು ಶಕ್ತಿ ರಾಜಕಾರಣದ ನೆಲೆಯಾಗಿದ್ದು

ಅದನ್ನು ಭಂಜನಗೊಳಿಸುವ ಪ್ರಯತ್ನ ಮಾಡಲಾಯಿತು. ಬಹುಶಃ ರಾಜಕಾರಣದ ಪ್ರಶ್ನೆಯಲ್ಲಿ ಸಕ್ರಿಯವಾಗಿ ಮಹಿಳೆಯರು ತೊಡಗಿಸಿಕೊಂಡಿದ್ದು ಸ್ವಾತಂತ್ರ್ಯ ಚಳುವಳಿಯಲ್ಲಿ. ಈ ಹಿನ್ನೆಲೆಯಲ್ಲಿ ಸ್ತ್ರೀಯರು ಲಿಂಗಭೇದ ವ್ಯವಸ್ಥೆಯನ್ನು ಕದಲಿಸಲು ಕ್ರಿಯಾತ್ಮಕವಾಗಿ ತೊಡಗಿಸಿಕೊಳ್ಳುವುದಕ್ಕೆ ಸಾಧ್ಯವಾಯಿತು. ಈ ಹಿನ್ನೆಲೆಯಲ್ಲಿ ಪುರಾಣ ಪಾತ್ರಗಳ ಮರುಶೋಧನೆಯನ್ನು ಕುವೆಂಪುರವರು ಶ್ರೀ ರಾಮಾಯಣದರ್ಶನಂ ಮಹಾಕಾವ್ಯದಲ್ಲಿ ಮಾಡಿದ್ದಾರೆ. ಸ್ತ್ರೀ ಸಮಾನತೆಯನ್ನು ಸ್ಥಾಪಿಸುವುದು, ಲಿಂಗ ಅಸಮಾನತೆಯನ್ನು ಮೀರುವುದು ಕುವೆಂಪು, ಪು.ತಿ.ನ. ಮೊದಲಾದ ನವೋದಯ ಕವಿಗಳ ಆಶಯವಾಗಿತ್ತು.

"ಸ್ತ್ರೀ ಶಕ್ತಿಯನ್ನು, ಸಮುದಾಯವನ್ನು ಸರಳವಾಗಿ ಎರಡಾಗಿ ಒಡೆದು ಪರಿಭಾವಿಸುವ ಮೂಲಕ ತನ್ನ ಶಕ್ತಿಯನ್ನು ಸಾಂದ್ರಗೊಳಿಸಿಕೊಳ್ಳುವುದು ಎಲ್ಲ ಯಜಮಾನ್ಯ ಸಂಸ್ಕೃತಿಗಳೂ ಕಂಡುಕೊಂಡಿರುವ ಪ್ರಬಲವಾದ ದಾರಿಯಾಗಿದೆ. ಇದಕ್ಕೆ ಭಾರತೀಯ ಸಮಾಜವೂ ಹೊರತಲ್ಲ. ಈ ಸಮಾಜವು ಸ್ತ್ರೀಯನ್ನು ಹೆಣ್ತನ ಮತ್ತು ತಾಯ್ತನಗಳ ನೆಲೆಯಲ್ಲಿ ಪ್ರತ್ಯೇಕಿಸಿಯೇ ಗ್ರಹಿಸುತ್ತಾ ಬಂದಿದೆ. ಪಶ್ಚಿಮದ ಜಗತ್ತು ಹೆಣ್ತನ ಮತ್ತು ತಾಯ್ತನಗಳೆಂಬ ಎರಡು ಸಾಂಪ್ರದಾಯಿಕ ಒತ್ತಾಯಗಳನ್ನು ಸ್ತ್ರೀಯರ ಮೇಲೆ ಹೇರುತ್ತಿವೆ ಎಂಬುದನ್ನು ವಿಶೇಷವಾಗಿ ಚರ್ಚಿಸುತ್ತದೆ. ಭಾರತೀಯ ಸಮಾಜವಾದರೋ ಈ ಸಾಂಪ್ರದಾಯಿಕ ಒತ್ತಾಯಗಳನ್ನು ಹೇರುವುದರ ಮೂಲಕ ಸ್ತ್ರೀವಾದಿ ಸಮುದಾಯವನ್ನು ಅಧೀನಗೊಳಿಸಿಕೊಳ್ಳುವ ದಾರಿಯನ್ನು ಹುಡುಕುತ್ತಲೇ ಅದರ ಇನ್ನಿತರ ವಿವಿಧೋದ್ದೇಶ ಯೋಜನೆಗಳನ್ನು ಫಲಪ್ರದವಾಗಿ ರೂಪಿಸಿಕೊಳ್ಳುವುದರಲ್ಲೂ ಆಸಕ್ತವಾಗಿದೆ."[13]

"12ನೇ ಶತಮಾನದ ವಚನ ಚಳುವಳಿಯ ಸಂದರ್ಭವನ್ನು ಲಿಂಗ ಸಮಾನತೆಗಾಗಿ ಹಂಬಲಿಸಿದ ಮಹೋನ್ನತ ಚಳುವಳಿಯಾಗಿ ನಿರ್ವಚಿಸಲಾಯಿತು. ಇದರಿಂದಾಗಿ ಕನ್ನಡ / ಕರ್ನಾಟಕದ ಸ್ತ್ರೀವಾದಿ ಚಿಂತನೆಯು ವಚನ ಚಳುವಳಿಯ ಅಸ್ಮಿತೆಯೊಂದಿಗೆ, ಅಕ್ಕಮಹಾದೇವಿಯ ಆದರ್ಶ ಸ್ಮರಣೆಯೊಂದಿಗೆ ನಿರ್ವಚನಗೊಳ್ಳಬೇಕಾದ ಸ್ತ್ರೀವಾದವಾಗಿ ಸ್ವಾತಂತ್ರ್ಯದ ಆಸುಪಾಸಿನಲ್ಲಿಯೇ ರೂಢಿಗೆ ಬಂದಿತು. ವೈದಿಕ ಹಾಗೂ ವೀರಶೈವ ಸಮುದಾಯಗಳ ಸಾಂಸ್ಕೃತಿಕ ರಾಜಕಾರಣದ ನೆರಳಲ್ಲಿ ರೂಪುಗೊಂಡ ಕರ್ನಾಟಕದ ಸ್ತ್ರೀವಾದವೇ ಸ್ವಾತಂತ್ರ್ಯಾ ನಂತರದ ಮೂರು ದಶಕಗಳು ಕರ್ನಾಟಕದಲ್ಲಿನ ಸ್ತ್ರೀವಾದಿ ಚಿಂತನೆಯ ಕೇಂದ್ರವಾಗಿ ಮುಂದುವರಿಯಿತು. ಸ್ತ್ರೀವಾದದ ಮೂರ್ತ ರೂಪಗಳಾದ ಗಾರ್ಗಿ, ಮೈತ್ರೇಯಿ, ಕಾತ್ಯಾಯಿನಿಯರೊಂದಿಗೆ ಅಕ್ಕಮಹಾದೇವಿಯೂ ತನ್ನ ಸ್ಥಾನ ಸ್ಥಿರಪಡಿಸಿಕೊಂಡಳು. ಅಕ್ಕಮಹಾದೇವಿಯು ಕರ್ನಾಟಕದ ಕೊಡುಗೆಯಾಗಿ ಭಾರತೀಯ ಸ್ತ್ರೀವಾದವನ್ನು ಪ್ರವೇಶಿಸಿ ಅದನ್ನು ಪುಷ್ಟಿಗೊಳಿಸಿದಳು. ಭಾರತ ಜನನಿಯ ತನುಜಾತೆಯಾದ ಕರ್ನಾಟಕ ಅದೇ ಸ್ವರೂಪದಲ್ಲಿ ಭಾರತೀಯ ಸ್ತ್ರೀವಾದವನ್ನು ಪ್ರವೇಶಿಸಿತು."[14] ಎಂದು ಡಾ॥ ಉಷಾ ರವರು ತಿಳಿಸುತ್ತಾರೆ.

ಸ್ತ್ರೀವಾದಿ ಚಿಂತನೆಯು ಕನ್ನಡ ಸಾಹಿತ್ಯ, ಸಂಸ್ಕೃತಿ ಇವುಗಳ ಮೇಲೆ ವಿಶೇಷ ಪ್ರಭಾವವನ್ನು ಬೀರಿದೆ. ಸೀತೆ, ಅಹಲ್ಯೆ, ಮಂಡೋದರಿ ಈ ಸ್ತ್ರೀಯರು ಸ್ತ್ರೀತ್ವದ ಮಾದರಿಗಳೆನಿಸಿಕೊಂಡ ಉಜ್ವಲ ಪುರಾಣ ಪ್ರತೀಕಗಳು. ಅವರ ಬದುಕಿನಲ್ಲಿ ಹುಟ್ಟುವ

ಜೀವನಾದರ್ಶದ ಪ್ರಶ್ನೆಗಳು, ಅವರು ಎದುರಿಸುವ ಬಗೆ, ಅದರಿಂದ ಮುಕ್ತರಾಗುವ ರೀತಿ ಇವುಗಳು ಕನ್ನಡ ಬರಹಗಾರರಿಗೆ ಮುಖ್ಯವಾದವು. ಪಿತೃರೂಪಿ ಲಿಂಗ ವ್ಯವಸ್ಥೆಯಲ್ಲಿ ಶೀಲ ಅಥವಾ ಪಾತಿವ್ರತ್ಯ ಎನ್ನುವ ಕಲ್ಪನೆಯನ್ನು ಮತ್ತು ಹೆಣ್ಣಿಗಷ್ಟೇ ಹೇರಲಾದ ಪಾತಿವ್ರತ್ಯದ ಒಮ್ಮುಖ ನಿಲವನ್ನು ಸ್ತ್ರೀವಾದಿಗಳಂತೆ ಕುವೆಂಪುರವರು ಸಹ ತಮ್ಮ ಸಾಹಿತ್ಯದಲ್ಲಿ ಪ್ರಶ್ನಿಸಿದ್ದಾರೆ. ಕುವೆಂಪುರವರ ಪ್ರಧಾನ ಆಶಯ ಹೆಣ್ಣು ಗಂಡಿನ ಅಸಮಾನತೆಯ, ಪರಸ್ಪರ ಗೌರವದ ಮಾನವ ಪರವಾದ ಕಾಳಜಿಯುಳ್ಳದ್ದಾಗಿದೆ. 'ರಾಮಾಯಣ ದರ್ಶನಂ' ನಲ್ಲಿ ಒಂದೊಂದು ಪಾತ್ರಗಳ ಹಿಂದಿರುವ ಸ್ತ್ರೀ ಶಕ್ತಿ ಕೇಂದ್ರಗಳನ್ನು ಶೋಧಿಸಿ, ಮರುವ್ಯಾಖ್ಯಾನಗೊಳಿಸಿ ಸ್ತ್ರೀತ್ವದ ಹೊಸ ಸಂಕಥನವನ್ನು ರೂಪಿಸಿದ್ದಾರೆ.

ಸ್ತ್ರೀ ಸಂವೇದನೆ, ಸ್ತ್ರೀ ಮನೋಭೂಮಿಕೆಯ ಚಿತ್ರಣ ಎಂದಾಗ ಬರಿಯ ಸ್ತ್ರೀಯರ ಸಂವೇದನೆ ಅಥವಾ ಸ್ತ್ರೀಯ ಮನೋಭಿವ್ಯಕ್ತಿ ಎನ್ನುವ ಅರ್ಥಕ್ಕೆ ಸೀಮಿತವಲ್ಲ. ಒಬ್ಬ ಸಾಹಿತಿಯು ಹೆಣ್ಣಾಗಿ ಅವಳ ಅನುಭವ ಲೋಕವನ್ನು ಪ್ರವೇಶಿಸಿ ಅವಳ ಮನೋ ನೆಲೆಗಳನ್ನು ಕುರಿತು ಬರೆದಾಗ ಮಾತ್ರ, ಸ್ತ್ರೀಪರ ಸಂವೇದನೆಯು ಪ್ರಕಟವಾಗುತ್ತದೆ. ಇದಕ್ಕೆ ಉತ್ತಮ ನಿದರ್ಶನವಾಗಿ ಕುವೆಂಪು, ಪು.ತಿ.ನ. ರವರ ಕೃತಿಗಳನ್ನು ಪರಿಶೀಲಿಸಬಹುದಾಗಿದೆ.

"ಸ್ತ್ರೀವಾದವೆಂದರೆ ಸಂವಹನ, ಅರ್ಥವಂತಿಕೆ, ಹೃದಯವಂತಿಕೆಗಳನ್ನು ಸ್ತ್ರೀಯರು ಇತರರಿಗೆ ನೀಡಿ ಇತರರಿಂದ ಅದನ್ನು ಸಹಜವಾಗಿ ಪಡೆಯುವುದಾಗಿದೆ. ಹೀಗೆ ತಾಯಿ, ತನ್ನ ಮಗುವಿಗೆ ಸಹಜವಾಗಿ ಹಾಲೂಡಿಸಿ ಪೋಷಿಸುವಳೋ ಹಾಗೆ ........." ಎಂದು ಡಾ॥ ಯು.ಆರ್. ಅನಂತಮೂರ್ತಿಯವರು ಅಭಿಪ್ರಾಯ ಪಡುತ್ತಾರೆ. ಇವರ ಈ ಮಾತುಗಳು ಕುವೆಂಪುರವರು "ಶ್ರೀ ರಾಮಾಯಣ ದರ್ಶನಂ" ಮಹಾಕಾವ್ಯದಲ್ಲಿ ಚಿತ್ರಿಸಿರುವ ಸೀತೆ, ಮಂಥರೆ, ಮಂಡೋದರಿಯಂಥ ಪಾತ್ರಗಳ ಮನೋ ಚಿತ್ರಣಕ್ಕೆ ಹತ್ತಿರವಾದ ಆಶಯಗಳಾಗಿವೆ.

ಕನ್ನಡ ನವೋದಯ ಕಾಲ ಘಟ್ಟದಿಂದ ಇಲ್ಲಿಯವರೆಗೂ ಪುರಾಣಗಳ ಮತ್ತು ಪ್ರಾಚೀನ ಕಾವ್ಯ, ಇತಿಹಾಸಗಳ ಸ್ತ್ರೀ ಪಾತ್ರಗಳ ಮೂಲಕ ತಮ್ಮ ಸಮಕಾಲೀನ ಸಂವೇದನೆಯನ್ನು ಬಿಂಬಿಸುವ ಸಾಹಿತ್ಯ ಪ್ರಕಾರಗಳು ಬಂದಿವೆ. ಇಲ್ಲಿ ಸೀತೆ, ಅಹಲ್ಯೆ, ಮಂಥರೆ, ಮಂಡೋದರಿ, ದ್ರೌಪದಿ ಮೊದಲಾದವರಿಗೆ ಹೊಸ ದನಿ ನೀಡಲಾಗಿದೆ ; ಅವರ ಮನೋ ನೆಲೆಗಳನ್ನು ಪ್ರಶ್ನಿಸಲಾಗಿದೆ. ಗಂಡು – ಹೆಣ್ಣಿನ ಸಂಬಂಧಗಳ ಬಗ್ಗೆ ಅರೋಗ್ಯಕರ ನಿಲುವುಗಳನ್ನು ಆರೋಗ್ಯವಂತ ಮನಸ್ಸಿನಿಂದ ಕನ್ನಡದ ಪ್ರಮುಖ ಲೇಖಕರಾದ ಕಾರಂತ, ಪು.ತಿ.ನ. ಕುವೆಂಪು ಮೊದಲಾದವರು ತಮ್ಮ ಸಾಹಿತ್ಯ ಕೃತಿಗಳಲ್ಲಿ ಪ್ರತಿಪಾದಿಸಿದ್ದಾರೆ.

"ಶ್ರೀ ರಾಮಾಯಣದರ್ಶನಂ" ಹೆಸರೇ ಸೂಚಿಸುವಂತೆ 'ದರ್ಶನ' ಒಂದು ವಿಶೇಷವಾದ ಕಾಣ್ಕೆಯನ್ನು ಕುವೆಂಪುರವರ ಈ ಮಹಾಕಾವ್ಯವು ದರ್ಶಿಸುತ್ತದೆ. ಇದು ಆಧುನಿಕ ಕಾಲದ ಒಂದು ಅತ್ಯುತ್ತಮ ಮಹಾಕಾವ್ಯವಾಗಿದೆ. ಅಲ್ಲಿನ ಸ್ತ್ರೀ ಪಾತ್ರಗಳು ಸ್ತ್ರೀ ಸಂಸ್ಕೃತಿಯ ಕೇಂದ್ರ ಬಿಂದುಗಳಾಗಿ ಬಹು ಎತ್ತರಕ್ಕೆ ನಿಲ್ಲುತ್ತವೆ. ಅಲ್ಲಿ ಸೀತೆಗೆ ಎಷ್ಟು ಸ್ಥಾನವಿದೆಯೋ, ಮಂಥರೆಗೂ ಅಷ್ಟೇ ಸ್ಥಾನವಿದೆ. ಮಂಡೋದರಿ,

ಊರ್ಮಿಳಾ, ಅಹಲ್ಯ ಹೀಗೆ ಒಂದೊಂದು ಚೇತನಗಳೂ ಹೊರಡಿಸುವ ಜಿಜ್ಞಾಸೆ ಕ್ರಾಂತಿಕಾರಿ ಪರಿಣಾಮವನ್ನು ಉಂಟು ಮಾಡುತ್ತವೆ. ನಾಗರೀಕತೆ, ಸಂಸ್ಕೃತಿ ಇವುಗಳ ಎಲ್ಲ ಆಯಾಮಗಳೂ ಮೂರ್ತಿವೆತ್ತಂತೆ ಸ್ತ್ರೀಯರು ಚಿತ್ರಿತವಾಗಿರುವುದನ್ನು ಇಲ್ಲಿ ಗುರುತಿಸಬಹುದಾಗಿದೆ. ಈ ಸ್ತ್ರೀ ಪಾತ್ರಗಳ ಮನೋಭೂಮಿಕೆಯನ್ನು ಕುರಿತ ಚಿಂತನೆ ಈ ಅಧ್ಯಯನ ಉದ್ದೇಶವಾಗಿದೆ.

ಕುವೆಂಪುರವರು ಶತಮಾನಗಳಿಂದ ನಮ್ಮ ಪರಂಪರೆ ಅಂಚಿಗೆ ತಳ್ಳಿದ್ದ ಸ್ತ್ರೀಯರಿಗೆ ಒಂದು ವೇದಿಕೆಯನ್ನು ಕೊಡುತ್ತಾರೆ. ಈ ಅಧ್ಯಯನದಲ್ಲಿ ಸ್ತ್ರೀಯರಿಗೆ ಕೊಟ್ಟ ವಿಶೇಷ ಸ್ಥಾನವನ್ನು ಹಾಗೂ ಅವರ ಮನೋಭೂಮಿಕೆಗಳನ್ನು ತಿಳಿಯುವ ಪ್ರಯತ್ನವನ್ನು ಮಾಡಲಾಗಿದೆ. ಕುವೆಂಪುರವರು ಸಾಹಿತ್ಯದಲ್ಲಿ ವಿಶೇಷವಾದ ಸ್ತ್ರೀ ಪರ ಕಾಳಜಿಗಳನ್ನು ವ್ಯಕ್ತಪಡಿಸುತ್ತಾರೆ. ಪುರಾಣದ ಕಥೆಯಾದ ವಾಲ್ಮೀಕಿ ರಾಮಾಯಣದ ಸ್ತ್ರೀ ಪಾತ್ರಗಳು ಇಂದಿಗೂ ಆದರ್ಶಮಾದರಿಗಳೆಂಬಂತೆ ರೂಪಿತವಾಗಿದೆ. ಸೀತೆ, ಮಂಡೋದರಿ ಇವರುಗಳ ಬಗ್ಗೆ ಒಳ್ಳೆಯ ಹಾಗೂ ವಿಶೇಷ ಒಲವು ಇಂದಿಗೂ ಇದೆ. ಆದರೆ ಇಲ್ಲಿ ಪುರುಷ ಪ್ರಧಾನ ಸಮಾಜವು ಹೇರಲ್ಪಟ್ಟ ನಿಯಮಗಳಿಗೆ ಬದ್ಧರಾಗಿ ಅಲ್ಲಿನ ಸ್ತ್ರೀಯರು ಇದ್ದರೆಂಬುದು ಮುಖ್ಯ ಕಾರಣ. ಸೀತೆಯಾಗಲೀ, ಮಂಡೋದರಿಯಾಗಲೀ ಪತಿಗೆ ಎದುರಾಡದೆ, ಅವರ ಮಾರ್ಗವನ್ನೆ ಅತಿವಿನಯದಿಂದ ಅನುಸರಿಸಿದರು. ಸೀತೆಯು ರಾಮನ ಅಣತಿಯಂತೆ ಅಗ್ನಿಗೆ ಹಾರಿ ಪಾತಿವ್ರತ್ಯವನ್ನು ನಿರೂಪಿಸಿದವಳು. ಹಾಗೂ ಉಳಿದ ಸ್ತ್ರೀಯರಾದ ಕೈಕೆ, ಮಂಥರೆಯಂಥವರು ಕುಟುಂಬವನ್ನು ಹಾಳು ಮಾಡುವ ಕುಟಿಲ ಸ್ತ್ರೀಯರಾಗಿ ನಿರೂಪಿತವಾಗಿದ್ದಾರೆ. ಊರ್ಮಿಳೆಯಂತೂ ವಾಲ್ಮೀಕಿ ರಾಮಾಯಣದಲ್ಲಿ ಯಾರ ಕಣ್ಣಿಗೆ ಕಾಣಸದಷ್ಟು ಮೂಲೆ ಗುಂಪಾಗಿದ್ದಾಳೆ. ಅಂಚಿಗೆ ಸಂದಿರುವ ಸ್ತ್ರೀಯರನ್ನು ಕೇಂದ್ರಕ್ಕೆ ತಂದು ಅವರ ಮನೋನೆಲೆಯಲ್ಲಿ ಎದುರಿಸಿದ ಸಂಘರ್ಷಗಳತ್ತ ಒಂದು ದೃಷ್ಟಿಕೋನವನ್ನು ಕುವೆಂಪುರವರು ಹರಿಸಿದ್ದಾರೆ. ಈ ಮೂಲಕ ಸ್ತ್ರೀಯರು ಸಂಸ್ಕೃತಿಯನ್ನು ಕಟ್ಟಿ ಉಳಿಸುವಲ್ಲಿ ಹೇಗೆ ಪ್ರಮುಖ ಪಾತ್ರ ವಹಿಸುತ್ತಾರೆಂಬುದನ್ನು, ಸೀತೆಯನ್ನು ಸ್ತ್ರೀಶಕ್ತಿಯ ಪ್ರತೀಕವಾಗಿ ತಂದಿರುವುದನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಕುವೆಂಪುರವರು ಒಬ್ಬ ಸ್ತ್ರೀವಾದಿಯಂತೆ ತಮ್ಮ ಆಲೋಚನೆಗಳನ್ನು, ವಿಚಾರಗಳನ್ನು ತರುತ್ತಾರೆ. ಸೀತೆಗಷ್ಟೇ ಅಲ್ಲ ರಾಮನಿಗೂ ಅಗ್ನಿಪ್ರವೇಶ ಮಾಡಿಸಿ ಹೊಸ ಮಾರ್ಗವನ್ನು ಸೃಷ್ಟಿಸಿದ್ದಾರೆ. ಇದು ಅವರ ಸ್ತ್ರೀಪುರುಷ ಸಮಾನ ಧೋರಣೆಗೆ ಸಾಕ್ಷಿಯಾಗಿದೆ. "ಸ್ತ್ರೀತ್ವನ್ನು ಎರಡಾಗಿಸುವ ಈ ಕೌಟುಂಬಿಕ ಪುರುಷ ರಾಜಕಾರಣದ ವಿಸ್ತೃತ ರೂಪವನ್ನೇ ನಾವು ಭಾರತದ ಸಾಂಸ್ಕೃತಿಕ ಹಾಗೂ ಸಾಮ್ರಾಜ್ಯಶಾಹೀ ರಾಜಕಾರಣದಲ್ಲಿಯೂ ನೋಡಬಹುದು. ಸಾಂಸ್ಕೃತಿಕ ಜಗತ್ತು ಹೀಗೆ ಒಡೆಯಲ್ಪಟ್ಟ ತಾಯ್ತನದೊಳಗೆ ಕೂಡ 'ದೇವಿ' ಹಾಗೂ 'ದುರ್ಗಿ' ಎಂಬ, 'ಶಕ್ತಿ' ಹಾಗೂ 'ಮಾರಿ' ಎಂಬ ಪರಸ್ಪರ ವಿರುದ್ಧದ ಗುಣ ವಿಚಾರಗಳನ್ನು ನಿರ್ವಹಿಸಿ ಅದನ್ನು ಇಲ್ಲಿನ ಸಾಂಸ್ಕೃತಿಕ ರಾಜಕಾರಣದ ಸುಸಂಸ್ಕೃತ ಹಾಗೂ ಅಸಂಸ್ಕೃತಿಗಳ ಪರ-ವಿರೋಧವಾಗಿ ನಿಲ್ಲಿಸಿದೆ"[15] ಎಂದು ನರಹಳ್ಳಿ ಬಾಲಸುಬ್ರಮಣ್ಯಂ ಅವರು ಗುರ್ತಿಸುತ್ತಾರೆ. ಅಂದರೆ ಸ್ತ್ರೀತ್ವಕ್ಕೆ ಮೇಲು ಹಾಗೂ ಕೀಳು ಎಂಬ ಎರಡೂ ಬಗೆಯ ಗುಣಗಳನ್ನು ಆರೋಪಿಸಿ, ಹೆಣ್ಣನ್ನು ನಿಯಂತ್ರಿಸುತ್ತಾ ಬಂದಿರುವ ಪುರುಷ ರಾಜಕಾರಣದ ನೆಲೆಗಳನ್ನು ಕುವೆಂಪು ಸಾಹಿತ್ಯದಲ್ಲಿ ಗುರುತಿಸಬಹುದಾಗಿದೆ. ಈ ರೀತಿ ಪುರುಷ ಸಮಾಜವು

ಕಲ್ಪಿಸಿರುವ ಹೆಣ್ಣಿನ ಸ್ಥಿರ ಮಾದರಿಗಳನ್ನು ಮೀರುವ ಪ್ರಯತ್ನವನ್ನು ಶ್ರೀ ರಾಮಾಯಣ ದರ್ಶನಂ ಕಾವ್ಯದಲ್ಲಿನ ಸ್ತ್ರೀಯರು ಮಾಡುತ್ತಾರೆ. ಸೀತೆ, ದ್ರೌಪದಿ, ತಾರಾ, ಕುಂತಿ, ಅಹಲ್ಯೆ, ಮಂಡೋದರಿ ಈ ಆದರ್ಶ ಪಾತ್ರಗಳ ಮೂಲಕ ಹೆಣ್ಣನ್ನು ಬಂಧಿಸುವ ಪ್ರಯತ್ನ ನಡೆದಿರುವುದಕ್ಕೆ ವಿರುದ್ಧವಾಗಿ ತಮ್ಮ ಮಹಾಕಾವ್ಯದಲ್ಲಿ ಹೊಸ ಚಹರೆಗಳನ್ನು ಕಟ್ಟಿಕೊಡುವ ಪ್ರಯತ್ನವನ್ನು ಕುವೆಂಪುರವರು ಮಾಡುತ್ತಾರೆ.

ಸಹಸ್ರಾರು ವರ್ಷಗಳಿಂದ ಬೇರು ಬಿಟ್ಟಿರುವ ಪುರಾಣ, ನಂಬಿಕೆ, ಐಹಿತ್ಯಗಳು, ಶಾಸ್ತ್ರ, ಸಂಪ್ರದಾಯಗಳು, ಸ್ತ್ರೀಯನ್ನು ಮೂಲೆ ಗುಂಪಾಗಿಸಿವೆ. ಇವುಗಳು ನಿರ್ಮಿಸಿದ ಸಂಕಥನಗಳಿಂದ ಬಂಧಿತಳಾದ ಸ್ತ್ರೀಯರನ್ನು ಮುಕ್ತರಾಗಿಸುವ ಪ್ರಯತ್ನವನ್ನು ಕುವೆಂಪುರವರು ತಮ್ಮ ಮಹಾಕಾವ್ಯದಲ್ಲಿ ಮಾಡಿದ್ದಾರೆ. ಇವುಗಳ ಸ್ವರೂಪವನ್ನು ಈ ಅಧ್ಯಯನ ಮುಖ್ಯ ಉದ್ದೇಶವಾಗಿರಿಸಿಕೊಂಡು ಚರ್ಚಿಸುತ್ತದೆ.

ನವೋದಯ ಕಾಲದ ಪ್ರಮುಖ ಲೇಖಕರಾದ ರವೀಂದ್ರನಾಥ ಠಾಗೂರ್, ಪು.ತಿ.ನ., ಬೇಂದ್ರೆ ಮತ್ತು ಕುವೆಂಪುರವರು ತಮ್ಮ ಸಾಹಿತ್ಯದಲ್ಲಿ ನಿರ್ಲಕ್ಷಿತರಾಗಿದ್ದ, ನೆಲೆಯನ್ನು ಕಳೆದುಕೊಂಡಿದ ಸ್ತ್ರೀಯರಿಗೆ ಹೊಸ ಅಸ್ತಿತ್ವವನ್ನು ಕೊಡುವ ಪ್ರಯತ್ನವನ್ನು ಮಾಡಿದ್ದಾರೆ.

ರವೀಂದ್ರನಾಥ ಠಾಗೂರರು ತಮ್ಮ ಕೃತಿಯಾದ 'ಪ್ರಾಚೀನ ಸಾಹಿತ್ಯದಲ್ಲಿ' ಷೇಕ್ಸ್‌ಪಿಯರ್ ಕವಿಯ ಟೆಂಪಸ್ಟ್ ನಾಟಕದ ಮಿರಾಂಡಳನ್ನು ಕಾಳಿದಾಸನ ಶಕುಂತಲೆಯನ್ನು ತುಲನಾತ್ಮಕವಾಗಿ ಅಧ್ಯಯನ ಮಾಡಿದ್ದಾರೆ. ಶಕುಂತಲೆಗೆ ವಿಶೇಷ ಸ್ಥಾನಮಾನಗಳನ್ನು ಕಟ್ಟಿಕೊಟ್ಟಿದ್ದಾರೆ. ಸೌಂದರ್ಯ ಹಾಗೂ ತಪಸ್ಸು ಇವೆರಡರ ಏಕತ್ರ ಮಿಳಿತವಾಗಿ ರೂಪುಗೊಂಡ ಶಕುಂತಲೆಯ ಮಹತ್ವವನ್ನು ಉನ್ನತಿಗೇರಿಸಿದ್ದಾರೆ. ಶಕುಂತಲೆಯ ತಪೋನೆಲೆಯಿಂದ ಆದ ಮಂಗಳಕರವಾದ ಸಿದ್ಧಿಯ ಮೂಲಕ ಹೊಸ ಅಸ್ತಿತ್ವವನ್ನು ಗುರುತಿಸಿದ್ದಾರೆ. ವಾಲ್ಮೀಕಿ ರಾಮಾಯಣದಲ್ಲಿ ಯಾರ ಗಮನಕ್ಕೂ ಬಾರದಿದ್ದ ಲಕ್ಷ್ಮಣನ ಸತಿಯಾದ ಊರ್ಮಿಳೆಯನ್ನು ಕೇಂದ್ರಕ್ಕೆ ತಂದು ಅಸ್ತಿತ್ವವನ್ನು ಕಟ್ಟಿಕೊಡುವ ಪ್ರಯತ್ನವನ್ನು ಮಾಡಿದ್ದಾರೆ. ಕಾವ್ಯದ ಎಲ್ಲಾ ಕರುಣಾಸಾಗರ ಸೀತೆಯ ಮೇಲಿದೆಯೇ ಹೊರತು ಊರ್ಮಿಳೆಯನ್ನು ಯಾರೂ ಗಮನಿಸಲಿಲ್ಲವೆಂದು ಹೇಳಿ 'ಕಾವ್ಯದ ಅನಾದರಕ್ಕೆ ಗುರಿಯಾದವಳೆಂದು' ಹೇಳುತ್ತಾರೆ. ಇದು ಕುವೆಂಪುರವರ ಊರ್ಮಿಳೆಯ ಹೊಸ ಅಸ್ತಿತ್ವದ ಹುಡುಕಾಟಕ್ಕೆ, ಹೇಗೆ ಮೂಲಪ್ರೇರಣೆಯಾಗಿದೆ ಎಂಬುದನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಬೇಂದ್ರೆಯವರ ಪಂಚಮಾತೆಯರ ಕಲ್ಪನೆಯನ್ನು ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ತಾಯಿತನದ ಪರಿಕಲ್ಪನೆಯ ವಿವಿಧ ಅವತಾರಗಳೇ ಬೇಂದ್ರೆಯವರ ಕವಿತೆಯ ಮೂಲ ನೆಲೆಯೆಂದು ಕೀರ್ತನಾಥ ಕುರ್ತ ಕೋಟಿಯವರು ಗುರ್ತಿಸಿದ್ದಾರೆ. ಬೇಂದ್ರೆಯವರ ಕಾವ್ಯದಲ್ಲಿ ನಾವು ಗ್ರಹಿಸುವ ದೇಸೀ ನೆಲೆಯು ಸ್ತ್ರೀ ಪೋಷಿತ ಪರಿಸರದ ಫಲಿತವೆಂಬುದನ್ನು ಹೆಚ್.ಎಸ್. ರಾಘವೇಂದ್ರರಾವ್‌ರವರು ಗುರುತಿಸಿದ್ದಾರೆ.

ಪು.ತಿ.ನ. ರವರು 'ಅಹಲ್ಯೆ' ನಾಟಕದಲ್ಲಿ ಹೆಣ್ಣಿನ ಮನಸ್ಸಿನ ಸೂಕ್ಷ್ಮನೆಲೆಯನ್ನು ಗ್ರಹಿಸುವ ಪ್ರಯತ್ನ ಮಾಡಿದ್ದಾರೆ. ಇದರಿಂದ ಪುರುಷ ಪ್ರಧಾನ ಸಮಾಜದ ಬಗ್ಗೆ ಅವರ ಮನದಲ್ಲಿರುವ ಅಸಮಾಧಾನವು ಇಲ್ಲಿ ವ್ಯಕ್ತವಾಗುತ್ತದೆ. 'ಅಹಲ್ಯೆ' ನಾಟಕದಲ್ಲಿ ಅಹಲ್ಯೆಯು ತನ್ನ ಅಸ್ತಿತ್ವಕ್ಕಾಗಿ ಹೋರಾಡುವ ಬಗೆಯನ್ನು ವಿಶೇಷ ರೀತಿಯಲ್ಲಿ ಕಟ್ಟುತ್ತಾ ಹೋಗುತ್ತಾರೆ. ಹೀಗೆ ಪು.ತಿ.ನ ರವರ ವ್ಯಕ್ತಿತ್ವದಲ್ಲೂ ಸ್ತ್ರೀ ಸಹಜ ಮಾರ್ದವವೊಂದು ಸೇರಿಕೊಂಡು ಅವರ ಕವಿಚೇತನದ ಸಸಿಗೆ ನೀರೆರೆದಂತೆ ಕಂಡುಬರುತ್ತದೆ. ಈ ನಾಟಕದಲ್ಲಿ ಅಹಲ್ಯೆಯ ಮಾನಸಿಕ ತೊಳಲಾಟವನ್ನು ಸೂಕ್ಷ್ಮಗ್ರಾಹಿಯಾಗಿ ಪು.ತಿ.ನ ರವರು ಕಟ್ಟಿಕೊಡುತ್ತಾರೆ. ಧರ್ಮ ವಿರೋಧಿ ಕಾಮ ನೆಲೆಗೆ ಅಹಲ್ಯೆ ತುಡಿಯುವುದು, ಅಂತರಂಗದ ಸಂಘರ್ಷಗಳನ್ನು ಎದುರಿಸುವುದು, ಧರ್ಮ ಹಾಗೂ ಕಾಮ ಈ ಎರಡು ನೆಲೆಗಳ ಆಯ್ಕೆಯಲ್ಲಿ ಅಹಲ್ಯೆ ಎದುರಿಸುವ ಬಿಕ್ಕಟ್ಟುಗಳನ್ನು ತಮ್ಮ ಕೃತಿಯಲ್ಲಿ ಕಟ್ಟಿಕೊಡುತ್ತಾರೆ. ಹೀಗೆ ಪು.ತಿ.ನ ರವರು ಪುರಾಣದ ಕಥಾವಸ್ತುವಿನ ಮೂಲಕ ಹೆಣ್ಣಿನ ಆಯ್ಕೆಯ ಪ್ರಶ್ನೆಯನ್ನು ಮುಖ್ಯವಾಗಿಸುತ್ತಾರೆ.

ಕುವೆಂಪುರವರು ಸ್ತ್ರೀಯರ ಅಸ್ತಿತ್ವದ ಬಗ್ಗೆ ಅಪಾರ ಶ್ರದ್ಧೆ ಹಾಗೂ ಕಾಳಜಿಯನ್ನು ವಹಿಸುವುದನ್ನು ಅವರ ಕಾವ್ಯದ ಆರಂಭದಲ್ಲಿ ಹೀಗೆ ಹೇಳಿದ್ದಾರೆ :

*"ಇತಿಹಾಸಮಲ್ತು; ಬರಿ ಕಥೆಯಲ್ತು; ಕಥೆ ತಾಂ*
*ನಿಮಿತ್ತಮಾತ್ರಂ. ಆತ್ಮಕೆ ಶರೀರದೋಲಂತೆ*
*ಮೆಯ್ವೆತ್ತುದಿಲ್ಲಿ ರಾಮನ ಕಥೆಯ ಪಂಜರದಿ*
*ರಾಮರೂಪದ ಪರಾತ್ಪರನ ಪುರುಷೋತ್ತಮನ*
*ಲೋಕಲೀಲಾ ದರ್ಶನಂ"*[6]

ವಾಲ್ಮೀಕಿ ರಾಮಾಯಣದಲ್ಲಿ ಇಲ್ಲದ ಅಸ್ತಿತ್ವ ಮಂಥರೆಗೆ ಇಲ್ಲಿ ದೊರೆಯುತ್ತದೆ. ಮಂಥರೆಯನ್ನು "ಮಮತೆಯ ಸುಳಿ" ಎಂದು ಕರೆದಿದ್ದಾರೆ. ಇವಳ ಕಾರಣದಿಂದಲೆ ಸೀತೆ, ರಾಮ, ಲಕ್ಷ್ಮಣ, ಊರ್ಮಿಳೆ, ಮಂಡೋದರಿ ಮುಂತಾದ ನಕ್ಷತ್ರಗಳು ಮಿನುಗಲು ಇಲ್ಲಿ ಸಾಧ್ಯವಾಗುತ್ತದೆ. ರಾಮನಿಗೆ 'ರಾಮಚಂದ್ರತ್ವ' ವನ್ನು ಪೂರ್ಣವಾಗಿಸಿದ, ಅನುಭೂತಿ ಪುರುಷನನ್ನಾಗಿಸಿದ ಒಂದು ಚೇತನವಾಗಿ ಮಂಥರೆ ಕಂಡು ಬರುತ್ತಾಳೆ. ಹೀನ ದುಷ್ಟೆಯೆಂದು ನಿರೂಪಿತವಾಗಿದ್ದ ಮಂಥರೆಯ ಮನೋನೆಲೆಯನ್ನು ಪರಿಶೀಲಿಸುವ ಪ್ರಯತ್ನ ಈ ಅಧ್ಯಯನದಲ್ಲದೆ. ಎಲ್ಲರಿಂದ ದ್ವೇಷಿತಳಾಗಿ ಇದ್ದ ಇವಳ ಮನಸ್ಥಿತಿಯನ್ನು ಅರಿಯುವ ಹಾಗೂ ಅವಳ ಪೂರ್ವವನ್ನು ಇಲ್ಲಿ ಒರೆಗೆ ಹಚ್ಚುವ, ಕಳಂಕದಿಂದ ಈ ಪಾತ್ರವನ್ನು ಮುಕ್ತವಾಗಿಸುವ ಪ್ರಯತ್ನವನ್ನು ಕುವೆಂಪುರವರು ಮಾಡಿದ್ದಾರೆ. ಮಂಥರೆಗೆ ದೊರೆತ ಹೊಸ ಅಸ್ತಿತ್ವ ಈ ಕಾವ್ಯದ ವಿಶೇಷ ಅಂಶವಾಗಿದೆ. ಇಡೀ ಸಮುದಾಯದಿಂದ ದೂರೀಕೃತಳಾದ, ಜೀವವೊಂದನ್ನು ಬಿಟ್ಟರೆ ಮಂಥರೆ ಬೇರೇನೂ ಇಲ್ಲದಂಥ ಸ್ಥಿತಿಯಲ್ಲಿ ಅವಳ ಜಡತ್ವಕ್ಕೆ ಕೈಕೆ ಚೈತ್ರವಾಗಿ ಬರುತ್ತಾಳೆ. ತನ್ನ ಚಹರೆಯನ್ನು ಕಟ್ಟಿಕೊಳ್ಳಲು ನಡೆಸುವ ರಾಜಕಾರಣದ ಸೂಕ್ಷ್ಮ ಅಂಶಗಳನ್ನು ಈ ಅಧ್ಯಯನ ಚರ್ಚಿಸುತ್ತದೆ. ಮಂಥರೆ ಮುನ್ನಾ ಸ್ಥಿತಿ ಹಾಗೂ ನಂತರದ ಸ್ಥಿತಿ ಇಡೀ ಮಹಾಕಾವ್ಯಕ್ಕೆ ಒಂದು ಹೊಸ ಆಯಾಮವನ್ನು ತಂದಿದೆ. ಇದರ ಸ್ವರೂಪವನ್ನು ಈ ಅಧ್ಯಯನವು ಪರಿಶೋಧಿಸುತ್ತದೆ.

'ಕವಿಕ್ರುತುದರ್ಶನ' ಈ ಸಂಪುಟವು ಸ್ತ್ರೀ ಪಾತ್ರಗಳ ಕೇಂದ್ರವಾಗಿದೆ. ಹೆಣ್ಣಿನ ಮನಸ್ಸಿನಲ್ಲಿರುವ ಭಯ, ಕಾತುರ, ಇವುಗಳು ಕನಸಿನ ಮೂಲಕ ಆಗುವ ಅನಾವರಣಕ್ಕೆ ಮನೋವೈಜ್ಞಾನಿಕವಾಗಿ ಅರ್ಥೈಸುವ ಪ್ರಯತ್ನವನ್ನು ಈ ಅಧ್ಯಯನ ಮಾಡುತ್ತದೆ.

ಸೀತೆಯ ತಪಸ್ಸಿಗೆ ಕುವೆಂಪುರವರು ಹೊಸ ನೆಲೆಯನ್ನು ಕಟ್ಟಕೊಟ್ಟದ್ದಾರೆ. ಸೀತೆಯ ಪ್ರಭಾವದಿಂದ ಅನೇಕ ಅಸುರಿ ಸ್ತ್ರೀಯರ ಪರಿವರ್ತನೆ ಆಗುವರಲ್ಲದೆ, ಇಡೀ ಲಂಕೆಯ ಅಸುರೀತನವೇ ನಾಶವಾಯಿತೆಂದು ಹೇಳುತ್ತಾ ಸ್ತ್ರೀಯನ್ನು ಸ್ತ್ರೀ ಶಕ್ತಿಯ ಪ್ರತೀಕವಾಗಿ ಕುವೆಂಪುರವರು ಚಿತ್ರಿಸಿದ್ದಾರೆ. ಇದನ್ನು ವಿಶೇಷವಾಗಿ ನೋಡುವ ಪ್ರಯತ್ನವನ್ನು ಇಲ್ಲಿಮಾಡಲಾಗಿದೆ.

ಸೀತೆ, ಮಂಡೋದರಿ, ಅಹಲ್ಯೆಯಂಥ ಪಾತ್ರಗಳು ಪುರುಷ ಜಗತ್ತು ಒಡ್ಡುವ ದಿವ್ಯಗಳನ್ನು ಗೆದ್ದು, ತಮ್ಮ ಪಾತಿವ್ರತ್ಯವನ್ನು ಸಾಬೀತುಪಡಿಸುತ್ತಾರೆ. ಊರ್ಮಿಳೆ ಮಂಡೋದರಿ, ಸೀತೆ ಮುಂತಾದವರು ಹೆಣ್ಣು ಸಾಂಕೇತಿಕವಾಗಿ, ಸಾಮಾಜಿಕವಾಗಿ, ಅನುಭವಿಸುತ್ತ ಬಂದ ಸಂದರ್ಭಗಳನ್ನು ಸಮರ್ಥವಾಗಿ ಪ್ರಕಟಿಸುತ್ತವೆಯಾದರೂ ಲಕ್ಷ್ಣ, ರಾಮ, ರಾವಣ ಮೊದಲಾದ ಪುರುಷ ಪಾತ್ರಗಳ ಆತ್ಮೋದ್ಧಾರಕ್ಕೆ ಮನಃ ಪರಿವರ್ತನೆಗೆ ಕಾರಣೀಭೂತರಾಗುತ್ತಾರೆ. ಈ ಎಲ್ಲ ಹೆಣ್ಣುಗಳು ಒಂದಲ್ಲ ಒಂದು ಬಗೆಯಲ್ಲಿ ತಮ್ಮ ಅಸ್ಮಿತೆಯನ್ನು ಸ್ಥಾಪಿಸುತ್ತಾರೆ. ಬೌದ್ಧಿಕ ಅಥವಾ ಆಧ್ಯಾತ್ಮಿಕ ಶಕ್ತಿಯ ಸಂಕೇತವಾಗಿ ಅಥವಾ ಪ್ರತಿನಿಧಿಯಾಗಿ ಸ್ತ್ರೀಪಾತ್ರಗಳು ಕುವೆಂಪು ಕಾವ್ಯದಲ್ಲಿ ಮೈ ತಳೆದಿವೆ. ಇದಲ್ಲದೆ ಸ್ತ್ರೀ ಶಕ್ತಿಯನ್ನು ಪ್ರಚಾರಪಡಿಸುವ ಅನೇಕ ಆಶಯಗಳು ಈ ಕಾವ್ಯದಲ್ಲಿ ಕಂಡುಬರುತ್ತದೆ. ಸ್ಥಾಪಿತ ಹೆಣ್ಣಿನ ಮಾದರಿಗಳನ್ನು ಮೀರಿದ ಚಿತ್ರಣವಾಗಿ ಮಂಥರೆ ಹಾಗೂ ಕೈಕೆಯ ಪಾತ್ರಗಳು ಬರುತ್ತವೆ. ಇವರು ಪ್ರಭುತ್ವ ಶಕ್ತಿ ಹಾಗೂ ಪುರುಷ ನಿರ್ಮಿತ ಕೌಟುಂಬಿಕ ವ್ಯವಸ್ಥೆಯನ್ನು ತಮ್ಮ ಬೌದ್ಧಿಕ ಶಕ್ತಿಯಿಂದಲೇ ಒಡೆಯುವ, ಪುನರ್ ಕಟ್ಟುವ ಪ್ರಯತ್ನ ನಡೆಸುತ್ತಾರೆ. ಬುದ್ಧಿ ಮತ್ತು ಬಲದ ಸಂಕೇತವಾದ ಗಂಡನ್ನು ಗೆಲ್ಲುವ ಮೂಲಕ ಅವನ ಒಡೆತನವನ್ನು ಒಡೆಯುತ್ತಾರೆ. ಅಂದರೆ ಸಾಂಪ್ರಾದಾಯಿಕ ಸ್ತ್ರೀ-ಪುರುಷ ಪರಿಕಲ್ಪನೆಗಳನ್ನು ತಮ್ಮ ತಳತಂತ್ರಗಳ ಮೂಲಕ ಭಂಜಿಸುವ ಪಾತ್ರವಾಗಿ ಮಂಥರೆ-ಕೈಕೆಯರು ಕುವೆಂಪು ಮಹಾಕಾವ್ಯದಲ್ಲಿ ಚಿತ್ರಿತಗೊಂಡಿದ್ದಾರೆ. ಹೀಗೆ ಇಲ್ಲಿನ ಹೆಣ್ಣುಗಳು ಪುರುಷನಿಷ್ಠ ಮೌಲ್ಯಗಳೊಂದಿಗೆ ಹೇಗೆ ಅನುಸಂಧಾನವನ್ನು ಸ್ಥಾಪಿಸುತ್ತವೆ. ಹೋರಾಟ ನಡೆಸುತ್ತವೆ ಹಾಗೂ ಹೆಣ್ತನದ ನಿರ್ಧಿಷ್ಟ ಚೌಕಟ್ಟನ್ನು ವಿರಚಿಸಿ ಹೊಸ ನಿರ್ವಚನವನ್ನು ಮಾಡುತ್ತವೆ ಎಂಬುದನ್ನು ಈ ಅಧ್ಯಯನ ಪರಿಶೀಲಿಸುತ್ತದೆ.

ಮಂಡೋದರಿ ಇನ್ನೊಬ್ಬ ಮಹಾಶಕ್ತಿಯಾಗಿ ನಿರೂಪಿತಳಾಗಿದ್ದಾಳೆ. ರಾವಣನ ಮನಸ್ಸಿನ ಪರಿವರ್ತನೆಗೆ ಸೀತೆಯ ತಪಸ್ಸೆಷ್ಟು ಕಾರಣವೋ ಮಂಡೋದರಿಯ ಆತ್ಮಶಕ್ತಿಯೂ ಅಷ್ಟೇ ಕಾರಣವಾಗುತ್ತದೆ. ಸೀತೆಯಿಂದಲೇ ವಂದಿತಳಾದ ಮಂಡೋದರಿಗೆ ವಿಶೇಷ ಭಿತ್ತಿಯನ್ನು ಕುವೆಂಪುರವರು ತಮ್ಮ ಕಾವ್ಯದಲ್ಲಿ ತಂದಿರುವುದು ವಿಶೇಷವಾಗಿದೆ. ಊರ್ಮಿಳೆಗೆ ದೊರೆತ ಹೊಸ ಅಸ್ತಿತ್ವವನ್ನು ಈ ಅಧ್ಯಯನವು ಚರ್ಚಿಸುತ್ತದೆ. ಪರಂಪರೆ ಹೀಗೆ ಅಂಚಿಗೆ ತಳ್ಳಿದ್ದ ಸ್ತ್ರೀಯರನ್ನು ಕೇಂದ್ರಕ್ಕೆ ತರುವ ಪ್ರಯತ್ನದಲ್ಲಿ ಊರ್ಮಿಳೆಗೆ ವಿಶೇಷ ಗೌರವವನ್ನು ಕುವೆಂಪುರವರು

ಸಲ್ಲಿಸಿರುವುದನ್ನು ಕಾಣಬಹುದಾಗಿದೆ. ಶಬರಿಯ ಸೇವೆಯು ಅತ್ಯುನ್ನತ ನೆಲೆಯಾಗಿ ಚಿತ್ರಿತಗೊಂಡಿರುವುದನ್ನು ಇಲ್ಲಿ ನೋಡಬಹುದಾಗಿದೆ. ರಾಮನಿಗೆ ಹೊಸ ಚೈತನ್ಯವನ್ನಿತ್ತ ಭಕ್ತೆಯಾಗಿ ರೂಪುಗೊಂಡಿದ್ದಾಳೆ. ರಾಮನ ರುಜೆಯನ್ನು ನೀಗಿ ಅದನ್ನು ತನ್ನ ಮೇಲೆ ಆವಾಹಿಸಿಕೊಂಡು ಅನಂತತೆಯನ್ನು ಮೆರೆದಿರುವುದನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಅಹಲ್ಯೆಯನ್ನು ಶಿಲಾತಪಸ್ವಿಯನ್ನಾಗಿ ರೂಪಿಸಿದ ಕುವೆಂಪುರವರ ವಿಶೇಷ ಕಾಳಜಿ ಇಲ್ಲಿ ಮುಖ್ಯವಾಗುತ್ತದೆ. ಗಂಡನಿಂದ ತಿರಸ್ಕೃತಳಾದ ಒಂದು ಹೆಣ್ಣಿನ ಸ್ವಾಭಿಮಾನ ಹಾಗೂ ತನ್ನ ಅಸ್ತಿತ್ವವನ್ನು ಮತ್ತೆ ಪ್ರಪಂಚಕ್ಕೆ ತೋರಲು ಶಿಲೆಯಾಗಿ ಧ್ಯಾನಮಾಡಿದ ದಿಟ್ಟ ಸ್ತ್ರೀಯಾಗಿ ಅಹಲ್ಯೆ ಕಂಡು ಬಂದಿರುವುದನ್ನು ನೋಡಲಾಗಿದೆ. ಕುವೆಂಪುರವರು ತಮ್ಮ ಸಾಹಿತ್ಯದಲ್ಲಿ ತಂದಿರುವ ಸ್ತ್ರೀಪರ ಕಾಳಜಿಗಳು ಮುಖ್ಯವಾಗಿವೆ. ಹೆಣ್ಣಿನ ಸೂಕ್ಷ್ಮ ಸಂವೇದನೆಗಳನ್ನು ಸಾಮಾಜಿಕ, ಧಾರ್ಮಿಕ ಹಾಗೂ ನೈತಿಕ ಸಂಘರ್ಷಗಳಿಗೆ ಎದುರಾಗಿಸಿಟ್ಟು ಆ ಸ್ಥಿತಿಯಲ್ಲಿ ಹೆಣ್ಣು ತೆಗೆದುಕೊಳ್ಳುವ ನಿರ್ಧಾರಗಳ ಮೂಲಕ ಕ್ರಾಂತಿಯ ಅಲೆಗಳನ್ನು ಹೊರಡಿಸುತ್ತಾರೆ. ಹೆಣ್ಣು ತನ್ನ ಅಸ್ತಿತ್ವಕ್ಕಾಗಿ ಹೋರಾಡಬೇಕು ಎಂಬುದನ್ನು ಈ ಮೂಲಕ ಹೇಳುತ್ತಾರೆ. ಸ್ತ್ರೀಯ ಮನಸ್ಸಿನಲ್ಲಿ ಉಂಟಾಗುವ ಮಾನಸಿಕ ಸಂಘರ್ಷಗಳಿಗೆ ಹೊಸ ವೇದಿಕೆಯನ್ನು ಕೊಡುತ್ತಾರೆ.

ಕುವೆಂಪುರವರು ತಮ್ಮ ಮಹಾಕಾವ್ಯದಲ್ಲಿ ಮಹಾಕವಿಯ ಅವಜ್ಞೆಗೆ ಒಳಗಾದ ಮಂಥರೆ, ಅಹಲ್ಯೆ, ಊರ್ಮಿಳೆ, ಸೀತೆಯಂಥ ಪಾತ್ರಗಳಿಗೆ ಹೊಸ ದರ್ಶನವನ್ನು ನೀಡಿದ್ದಾರೆ, ಹೊಸ ಅಸ್ತಿತ್ವ ಸ್ಥಾಪಿಸಿದ್ದಾರೆ. ಸ್ತ್ರೀ ಪರವಾದ ಸಹಾನುಭೂತಿಯ ನಿಲುವನ್ನು ತಳೆದಿದ್ದಾರೆ. ಪ್ರೀತಿ, ಪ್ರೇಮ, ತ್ಯಾಗ, ಸ್ನೇಹ, ಸೌಹಾರ್ದತೆ, ಆದರ್ಶಗಳಂತಹ ಮೌಲ್ಯಗಳ ಹಿನ್ನೆಲಯಲ್ಲಿ ಅಂಗ ಸಂಬಂಧದ ಅನುಭವಗಳನ್ನು ಕುವೆಂಪು ಕಾವ್ಯ ಚಿತ್ರಿಸುತ್ತದೆ. ಪ್ರಕೃತಿ, ದೇವರು, ಧರ್ಮ, ಆಧ್ಯಾತ್ಮ, ತಪಸ್ಸುಗಳಂತಹ ಪಾರಂಪರಿಕ ಮೌಲ್ಯಗಳನ್ನು ಮರು ಪರಿಶೀಲಿಸುವ ಪ್ರಯತ್ನಗಳು ಕಾವ್ಯದಲ್ಲಿ ಹೇಗೆ ಅಭಿವ್ಯಕ್ತಗೊಂಡಿವೆ ಎಂಬುದನ್ನು ಈ ಅಧ್ಯಯನದ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಇಲ್ಲಿ ಕುವೆಂಪುರವರ ಸ್ತ್ರೀ ಸಂವೇದನೆಯ ಚಿತ್ರಣದ ಜೊತೆಗೆ ಹೆಣ್ಣಿನ ಸರ್ವತೋಮುಖ ಬೆಳವಣಿಗೆಯನ್ನು, ಸ್ತ್ರೀ ಸ್ವತಂತ್ರತೆ ಸಮಾನತೆ ಅಸ್ತಿತ್ವ ಕುರಿತು ಆಲೋಚನೆಗಳನ್ನು, ಮನಃಶಾಸ್ತ್ರಕ್ಕೆ ಮತ್ತು ಅಸ್ತಿತ್ವವಾದಕ್ಕೆ ಸಂಬಂಧಿಸಿದಂತಹ ಸನ್ನಿವೇಶ ಚಿತ್ರಣಗಳನ್ನು ಈ ಕಾವ್ಯ ಒಳಗೊಂಡಿದೆ. ಕೈಕೆ, ಮಂಥರಯರಿಗೆ ಇರುವ ಪ್ರತಿ ಸಂಸ್ಕೃತಿಯ ಸಂವೇದನೆಗಳು, ಚಾರಿತ್ರಿಕ ಪ್ರಜ್ಞೆ, ರಾಜಕಾರಣದಲ್ಲಿ ಸ್ತ್ರೀಯರ ಕೈವಾಡ, ಅಸಹಾಯಕತೆ, ಮಾನಸಿಕ ತೊಳಲಾಟ ಮೊದಲಾದ ಸಮಕಾಲೀನ ವಸ್ತುಸ್ಥಿತಿಯ ಸ್ತ್ರೀ ಕೇಂದ್ರಿತ ಅನುಭವಗಳನ್ನು ಕಟ್ಟಿಕೊಡುವ ಪ್ರಯತ್ನವನ್ನು ಈ ಅಧ್ಯಯನ ಮಾಡುತ್ತದೆ.

ಪರಂಪರೆ ಮತ್ತು ಹೆಣ್ಣು, ಧರ್ಮ ಮತ್ತು ಹೆಣ್ಣು, ಹೆಣ್ಣು ಮತ್ತು ಪ್ರಭುತ್ವ ಮೊದಲಾದವುಗಳ ನಡುವಿನ ಸಂಬಂಧವನ್ನು ಕಟ್ಟಿಕೊಂಡು ಬಂದ ಕನ್ನಡ ಸಾಹಿತ್ಯ ಹೆಣ್ಣನ್ನು ಹೇಗೆ ಕಂಡರಿಸಿದೆ? ಇಲ್ಲಿಯ ಸ್ತ್ರೀ ಲೊಕ ಹೇಗಿದೆ? ಅದು ಪ್ರಕಟಿಸುವ ಸ್ತ್ರೀ ಸಂವೇದನೆಗಳು, ಮನೋ ನೆಲೆಗಳು ಏನು? ಎನ್ನುವ ಶೋಧನೆ ಸ್ತ್ರೀ ಸಂಕಥನದ ಪ್ರಮುಖ ಭಿತ್ತಿಯಾಗಿದೆ. ಹೆಣ್ಣಿನ ದಮನದ, ಹಿಂಸೆಯ ಮೂಲಭೂತ ಕೇಂದ್ರಗಳಲ್ಲಿ ಅರಮನೆ ಅಥವಾ ಕುಟುಂಬವೂ ಒಂದು. ರಾಜಕೀಯದ ಶಕ್ತಿ. ಈ ಕೇಂದ್ರವನ್ನು

ತನ್ನದೇ ಧಾಟಿಯಲ್ಲಿ ಸ್ತ್ರೀ ಲೋಕ ಪಲ್ಲಟಗೊಳಿಸುವ ಪ್ರಯತ್ನ ಮಾಡಿತು. ಗಂಡು ಜಗತ್ತಿನಲ್ಲಿ, ಅಸ್ತಿತ್ವದ ಹುಡುಕಾಟದಲ್ಲಿ, ಶಕ್ತಿ ರಾಜಕಾರಣದ ಪಲ್ಲಟಗಳಲ್ಲಿ ಲೌಕಿಕಕ್ಕೆ ಪರ್ಯಾಯವಾಗಿ ಅಲೌಕಿಕ ಜಗತ್ತಿನ ನಿರ್ಮಾಣ ಪ್ರಕ್ರಿಯೆಗಳು ಗಂಡಿನ ವಾಸ್ತವಕ್ಕೆ ನೀಡುವ ಪ್ರತಿಭಟನೆಯ ಒಂದು ಮಾದರಿಯಂಬಂತೆ ಭಕ್ತಿ ಪಂಥ, ದಾಸ ಪಂಥಗಳ ಆಂದೋಲನಗಳಲ್ಲಿ ಹಾಗೂ ನವೋದಯ ಸಂದರ್ಭದಲ್ಲಿನ ಮುಖ್ಯ ಕವಿಯಾಗಿ ಶ್ರೀ ಕುವೆಂಪುರವರ ಕೃತಿಗಳಲ್ಲಿ ಕಾಣಬಹುದಾಗಿದೆ. ಹಾಗೆ0ಯೇ ವಿಶೇಷವಾಗಿ ಹೆಣ್ಣನ್ನು ಮೌನಗೊಳಿಸುವ ಕ್ರಿಯೆಯನ್ನು ಪುರುಷ ರಾಜಕೀಯ ಅಂಶವಾಗಿಯೂ ಇಲ್ಲಿ ನೋಡಲಾಗಿದೆ. ಈ ನೆಲೆಯಲ್ಲಿ, ಬಹುರೂಪಿ ಸಾಂಸ್ಕೃತಿಕ ಪಠ್ಯವಾದ 'ಶ್ರೀ ರಾಮಾಯಣದರ್ಶನಂ' ಕೃತಿ0ಯಲ್ಲಿ ಸ್ತ್ರೀ ಪ್ರತಿಮೆಗಳ ಶೋಧ ನಮ್ಮ ಪುರಾಣಗಳಲ್ಲಿ ಚಿತ್ರಿಸಿರುವ ಸ್ಥಾಪಿತ ಗೃಹೀತಗಳನ್ನು ಮುರಿದು ಹೊಸ ವ್ಯಾಖ್ಯಾನಗಳನ್ನು ನೀಡಲಾಗಿದೆ. ಸ್ತ್ರೀ ಮೌಲೀಕರಣವನ್ನು ಆಯ್ದು ಕೊಳ್ಳಲಾಗಿದೆ. ಲಿಂಗ ಪ್ರಭೇದ ರಚನೆಯನ್ನು ಮುರಿದು ಹೆಣ್ಣು ತನ್ನ ಅಸ್ಮಿತೆಯನ್ನು ದಾಖಲಿಸಿದ್ದನ್ನು ಗುರುತಿಸುವುದು ಹೆಣ್ಣಿನ ಸಾಂಸ್ಕೃತಿಕ ಮೌನದ ಹಿಂದಿರುವ ಸ್ತ್ರೀ ಶಕ್ತಿಯನ್ನು ಪ್ರತೀಕ ಪಡಿಸುವುದು ಹಾಗೂ ಹೆಣ್ಣಿನ ಸ್ವರೂಪದ ವಿಶ್ಲೇಷಣೆ ಮೊದಲಾದವುಗಳನ್ನು ಈ ಕೃತಿಯಲ್ಲಿ ಈ ಅಧ್ಯಾಯದಲ್ಲಿ ಪರಿಶೀಲಿಸುತ್ತದೆ.

ಒಟ್ಟಿನಲ್ಲಿ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯವು ಪುರಾಣ ಪಾತ್ರಗಳನ್ನು, ಪೌರಾಣಿಕ ಪ್ರತಿಮೆಗಳನ್ನು, ಸ್ತ್ರೀಪರ ಕಾಳಜಿಗಳನ್ನು ಹಾಗೂ ಸ್ತ್ರೀ ಮನೋನೆಲೆಗಳನ್ನು, ಸಮಕಾಲೀನ ನೆಲೆಯಲ್ಲಿ ಹೇಗೆ ಗ್ರಹಿಸಿದೆ ಎಂಬುದನ್ನು ಪರಿಶೀಲಿಸುವ ಪ್ರಯತ್ನವನ್ನು ಈ ಅಧ್ಯಯನ ಒಳಗೊಂಡಿದೆ.

**ಅಡಿ ಟಿಪ್ಪಣಿ**

1. ಶಕ್ತಿ ಶಾರದೆಯ ಮೇಳ, ಡಿ. ಆರ್. ನಾಗರಾಜ್, ಹೆಗ್ಗೋಡು, 2002, ಪು. 56
2. ಅದೇ, ಪು.53–54
3. ಮಹಿಳಾ ಸಂಕಥನ, ಡಾ॥ ಗಾಯಿತ್ರಿ ನಾವಡ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು 2003, ಪು.– 68
4. ಹಾಡೆ ಹಾದಿಯ ತೋರಿತು, ಎಚ್.ಎಸ್. ರಾಘವೇಂದ್ರರಾವ್, ಕನ್ನಡ ಸಂಘ, ಕ್ರೈಸ್ಟ್‌ಕಾಲೇಜು, ಬೆಂಗಳೂರು, 1993, ಪು. 49
5. ಅದೇ, ಪು. 31
6. ಶ್ರೀ ರಾಮಾಯಣ ದರ್ಶನಂ, ಮಹಾಸಂಪುಟ, ಮೈಸೂರುವಿ.ವಿ., ಮೈಸೂರು 1971, ಪು. 858
7. ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ, ಡಾ॥ ಎಂ. ಉಷಾ ಕನ್ನಡ ವಿಶ್ವವಿದ್ಯಾಲಯ, ಹಂಪೆ, 2001, ಪು.1–2
8. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿ ಪು. 28
9. ಸ್ತ್ರೀವಾದ ದಿಕ್ಸೂಚಿ, ಪು. 2
10. ಮಹಿಳಾ ಅಧ್ಯಯನದ್ಮ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿ, ಪು. 28
11. ಸ್ತ್ರೀವಾದಿ ಓದು, ಪು. 67
12. ಪಶ್ಚಿಮದ ಸ್ತ್ರೀವಾದಿ ವಿಮರ್ಶಾಪಂಥಗಳು, ಡಾ॥ ಬಿ. ಎನ್. ಸುಮಿತ್ರಾಬಾಯಿ. ಹಂಪಿ ಕನ್ನಡ ವಿಶ್ವವಿದ್ಯಾಲಯ, 2003 ಪು. 1
13. ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ, ಡಾ.ಎಂ. ಉಷಾ, ಪು. 31
14. ಅದೇ, ಪು. 41
15. ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ, ಪು. 1–2
16. ಶ್ರೀ ರಾಮಾಯಣದರ್ಶನಂ, ಮಹಾಸಂಪುಟ, ಪು:858

# ಅಧ್ಯಾಯ – 2
## ಕುವೆಂಪುರವರ ಸ್ತ್ರೀತ್ವದ ಕಲ್ಪನೆ

ಆಧುನಿಕ ಪೂರ್ವ ಹಾಗೂ ಆಧುನಿಕ ಭಾರತದ ಒಟ್ಟು ಸ್ಥಿತ್ಯಂತರಗಳು ಸ್ತ್ರೀಶಕ್ತಿ ಮತ್ತು ಸ್ತ್ರೀ ಸಂವೇದನೆಗಳಿಂದ ಕೂಡಿದ್ದಾಗಿದೆ. ಒಟ್ಟು ಭಾರತೀಯ ಸಂವೇದನೆಯೂ ಸ್ತ್ರೀ ಸಂವೇದನೇಯುಳ್ಳದ್ದೇ ಆಗಿದೆ. ಸ್ತ್ರೀ ಸಂವೇದನೆಯೂ ಕೂಡ ಪುರುಷ ಸಂವೇದನೆಯಂತೆ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಸ್ವರೂಪಗಳಿಂದ ಕೂಡಿದ್ದಾಗಿದೆ. ಭಾರತದ ಸಾಂಸ್ಕೃತಿಕ ಚರಿತ್ರೆಯಿಂದ ಕಟ್ಟಲ್ಪಟ್ಟಿರುವ ಸ್ತ್ರೀತ್ವದ ಇಂಥ ಕಲ್ಪನೆಯ ವೈಭವೀಕರಣ ಒಂದೆಡೆ ಇದ್ದರೆ, ಮತ್ತೊಂದು ಕಡೆ ಪುರುಷ ಜಗತ್ತಿನೆದುರು ಸ್ತ್ರೀಯರು ಮೌನದ ಸಂಕಟವನ್ನು ಅನುಭವಿಸುತ್ತಾ ಬಂದಿರುವ ಚಿತ್ರಣ ನಮ್ಮ ಮುಂದಿದೆ. ನಿಸ್ವಾರ್ಥತೆ ಮೂರ್ತಿಗಳಾದ ಪುರಾಣ ಪ್ರತಿಮೆಗಳನ್ನು ದೇವತಾ ರೂಪಿಣಿಯರಂತೆ ಬಿಂಬಿಸಲಾಗಿದೆ. ತಾಯ್ತನದ ಶ್ರೇಷ್ಠತೆ ಮತ್ತು ಅದರ ವೈಭವೀಕರಣವನ್ನು ಮಾಡುತ್ತಾ ಬರಲಾಗಿದೆ.

ಕನ್ನಡ ನವೋದಯ ಲೇಖಕರ ಸಾಹಿತ್ಯ ರಚನೆಗಳು ಸ್ತ್ರೀಪರ ಸಂವೇದನೆಯನ್ನುಳ್ಳದ್ದು ಹಾಗೂ ಸಾಮಾಜಿಕ ನಿಲುವುಗಳುಳ್ಳದ್ದಾಗಿದೆ. ಕುವೆಂಪು, ಬೇಂದ್ರೆ, ಪು.ತಿ.ನ, ಮಾಸ್ತಿ ಮೊದಲಾದ ಲೇಖಕರ ಸಾಹಿತ್ಯದ ಒಲವು ನಿಲುವುಗಳು ಸ್ತ್ರೀಪರ ಧೋರಣೆಗಳನ್ನು ಹೊಂದಿವೆ. ಗಂಡು ಹೆಣ್ಣಿನ ಸಂಬಂಧವನ್ನು ಕುರಿತ ವಿವೇಚನೆ, ಸಾಮಾಜಿಕ ಅಸಮಾನತೆಯ ಪ್ರಶ್ನೆ, ಲಿಂಗರಾಜಕಾರಣದ ಪ್ರಶ್ನೆ, ಸ್ತ್ರೀ ಶಿಕ್ಷಣ ಅಗತ್ಯದ ಅರಿವು, ಮಾತೃ ಪ್ರಧಾನ ವ್ಯವಸ್ಥೆಯ ಆಶಯ, ಸ್ತ್ರೀ ಸ್ವಾತಂತ್ರ್ಯತೆ – ಇವೇ ಮೊದಲಾದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಕಾಳಜಿಗಳನ್ನು ಮುಖ್ಯವಾಗಿರಿಸಿಕೊಂಡು ನವೋದಯ ಕವಿಗಳು ಸಾಹಿತ್ಯ ರಚನೆ ಮಾಡಿದ್ದಾರೆ. ಇವರ ಸಾಹಿತ್ಯ ರಚನೆಗೆ ಸಾಮಾಜಿಕ ಸ್ಥಿತ್ಯಂತರಗಳು, ಚಾರಿತ್ರಿಕ ಒತ್ತಡ ಮತ್ತು ಆಂತರಿಕ ಅಗತ್ಯಗಳು ಕಾರಣವಾದಂತೆ, ಸ್ತ್ರೀ ಶಿಕ್ಷಣ, ಸ್ವಾತಂತ್ರ್ಯ ಸಮಾನತೆ, ಭಾರತೀಯತೆ, ಭಾರತಾಂಬೆ – ಮೊದಲಾದ ಅಂಶಗಳು ಪ್ರೇರಣೆ ನೀಡಿವೆ. ಆದರೆ, "ಸಾಮಾಜಿಕವಾಗಿ ಸಾಹಿತ್ಯಕವಾಗಿ ಒಟ್ಟಿನಲ್ಲಿ ಹೇಳುವುದಾದರೆ ಸಾಂಸ್ಕೃತಿಕವಾಗಿ ನಮ್ಮ ದೇಶದ ಮಹಿಳೆಯರು ಅಭಿವ್ಯಕ್ತಿಯ ಅನುಕೂಲ ಮತ್ತು ಅವಕಾಶಗಳಿಂದ ವಂಚಿತರಾಗಿಯೇ ಇದ್ದರೆನ್ನುವುದು ಐತಿಹಾಸಿಕ ಸತ್ಯ"[1] ಎನ್ನುವ ಮಾತು ಸ್ತ್ರೀವಾದಿ ಚಿಂತಕರದ್ದಾಗಿದೆ. ಪ್ರೀತಿ, ಪ್ರೇಮ, ತ್ಯಾಗ, ಸ್ನೇಹ, ಸೌಹಾರ್ದತೆ, ಆದರ್ಶಗಳಂತಹ ಮೌಲ್ಯಗಳ ಹಿನ್ನೆಲೆಯಲ್ಲಿ ಬದುಕಿನ ಅನುಭವಗಳನ್ನು ಚಿತ್ರಿಸುವುದು; ಪ್ರಕೃತಿ ದೇವರು–ಧರ್ಮ, ಆಧ್ಯಾತ್ಮ ಕುರಿತು ಒಲವು ಮೂಡಿಸುವುದು; ಸಾಮಾಜಿಕ ಸುಧಾರಣೆ, ರಾಷ್ಟ್ರೀಯತೆಯ ಕಾಳಜಿಗಳನ್ನು ಅಭಿವ್ಯಕ್ತಿಸುವುದು ಈ ಮೊದಲಾದ ಆಶಯಗಳನ್ನು ನವೋದಯ ಕವಿಗಳು ತಮ್ಮ ಸಾಹಿತ್ಯ ಕೃತಿಗಳಲ್ಲಿ ತಂದಿದ್ದಾರೆ. ಅಲ್ಲದೆ ಭಾರತೀಯ ಸಂಸ್ಕೃತಿಯ ಸ್ತ್ರೀತ್ವದ ಮಾದರಿಗಳು ಬದಲಾದುದರ ಒಟ್ಟು ಚಿತ್ರಣವನ್ನು ಇವರ ಸಾಹಿತ್ಯ ಕೃತಿಗಳಲ್ಲಿ ಗುರುತಿಸಬಹುದಾಗಿದೆ.

ಕುವೆಂಪುರವರು ಕಟ್ಟಿಕೊಡುವ ಸ್ತ್ರೀಲೋಕ ವೈವಿಧ್ಯಮಯವಾದದ್ದು. ಎಲ್ಲ ವರ್ಗದ, ಜಾತಿಯ, ವಿಭಿನ್ನ ಮನಸ್ಥಿತಿಯ, ವಿಭಿನ್ನಸ್ತರದ ಸ್ತ್ರೀಪಾತ್ರಗಳನ್ನು ಅವರ ಒಟ್ಟು ಕೃತಿಗಳಲ್ಲಿ ಗುರುತಿಸಬಹುದಾಗಿದೆ. ಅವುಗಳಲ್ಲಿ ಕೆಲವುಗಳು ಹೀಗಿವೆ;

1. ಚರಿತ್ರೆಯೇ ಇಲ್ಲದವರಿಗೆ ಚರಿತ್ರೆಯನ್ನು ಕಟ್ಟಿಕೊಡುತ್ತಾರೆ. ಉದಾಹರಣೆಗೆ : ಮಂಥರೆ
2. ದನಿಯೇ ಇಲ್ಲದವರಿಗೆ ದನಿಯನ್ನು ಕೊಡಿಸುತ್ತಾರೆ. ಉದಾಹರಣೆಗೆ : ಊರ್ಮಿಳೆ
3. ಅತ್ಯಂತ ತಳ ಸಮುದಾಯದವರನ್ನು ಪ್ರಧಾನ ಭೂಮಿಕೆಗೆ ತಂದು ನಿಲ್ಲಿಸುತ್ತಾರೆ. ಉದಾಹರಣೆಗೆ : ಮಂಥರೆ, ಮಂಡೋದರಿ, ತಿಮ್ಮಿ, ಸೇಸಿ ಮುಂತಾದವರು"[2]

ಇವರೆಲ್ಲಾ ತಮ್ಮ ವ್ಯಕ್ತಿಗಳ ಮಿತಿ ಹಾಗೂ ಸಾಮಾಜಿಕ ಚೌಕಟ್ಟಿನೊಳಗೆ ಹೊಸತನ್ನು ಸಾಧಿಸಲು ಪ್ರಯತ್ನಿಸಿದವರು. ಇದಲ್ಲದೆ ಸ್ತ್ರೀಯರನ್ನು ತನ್ನೆಲ್ಲ ವ್ಯಕ್ತಿತ್ವದ ಮಿತಿ, ಸಾಧ್ಯತೆಗಳೊಂದಿಗೆ ಶಕ್ತಿಸ್ವರೂಪಿಣಿಯಾಗಿ ಬೆಳೆದು ನಿಲ್ಲುವ ಪಾತ್ರವಾಗಿ ಸೀತೆಯನ್ನು ರೂಪಿಸಿರುವುದು ಕುವೆಂಪುರವರ ಮಹಾಕಾವ್ಯದ ವೈಶಿಷ್ಟ್ಯವಾಗಿದೆ. ಶ್ರೀ ಕುವೆಂಪುರವರ ಸಾಹಿತ್ಯ ಮತ್ತು ಸಾಂಸ್ಕೃತಿಗಳ ಚಿಂತನೆಯ ಕೇಂದ್ರ ಬಿಂದು ಸ್ತ್ರೀ ಸಂವೇದನೆಯುಳ್ಳದ್ದು. ಪ್ರಕೃತಿ ಅವರ ಸ್ಫೂರ್ತಿಯ ಸೆಲೆಯಾದಂತೆ ಸ್ತ್ರೀತ್ವದ ಕಲ್ಪನೆಗಳು ಅವರ ಚಿಂತನೆಯ ಮೂಲ ಸೆಲೆಯಾಗಿವೆ. ಸ್ತ್ರೀ ಮತ್ತು ಪ್ರಕೃತಿ ಇವೆರಡು ಒಂದೇ ಎಂಬಂತೆ ಅವರ ಒಟ್ಟು ಸಾಹಿತ್ಯದಲ್ಲಿ ಅಭಿವ್ಯಕ್ತಿಗೊಂಡಿದೆ. ಅವರ 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯವು ಕೂಡ ಸ್ತ್ರೀ ಸಂವೇದನೆಯುಳ್ಳ ಉತ್ಕೃಷ್ಟ ಕೃತಿಯಾಗಿದೆ. ಸ್ತ್ರೀಶಕ್ತಿ, ಪ್ರಕೃತಿ, ಭೂಮಿ, ಮೊದಲಾದ ಸ್ತ್ರೀ ಪರವಾದ ರೂಪಗಳು ಸಾಂಕೇತಿಕ ನೆಲೆಯಲ್ಲಿ ಅಭಿವ್ಯಕ್ತಗೊಂಡಿವೆ. ಪುರಾಣ ಪಾತ್ರಗಳನ್ನು ಹಾಗೂ ಪುರಾಣ ಪ್ರತಿಮೆಗಳನ್ನು ಮರುಶೋಧನೆಗೆ ಒಳಪಡಿಸಿದ್ದಾರೆ. ಸ್ತ್ರೀತ್ವದ ಭೌದ್ಧಿಕ ಹಾಗೂ ನೈತಿಕ ಮಹತ್ವಾಕಾಂಕ್ಷೆಗಳ ಸಾಧನೆಗೆ ಒಂದು ಹೊಸ ಪ್ರಜ್ಞಾವೇದಿಕೆಯನ್ನು ಕಟ್ಟಿಕೊಟ್ಟಿದ್ದಾರೆ. ಕುವೆಂಪು ಅವರ ಇಂಥ ಆಶಯಗಳಿಗೆ ಗಾಂಧೀಜಿ ಹಾಗೂ ಅವರ ಅರ್ಧನಾರೀಶ್ವರ ಕಲ್ಪನೆಗಳು ಮೂಲ ಪ್ರೇರಣೆಯನ್ನು ಒದಗಿಸಿವೆ.

ಕುವೆಂಪು ಅವರು ಪುರಾಣಗಳಲ್ಲಿನ ಸ್ತ್ರೀಪಾತ್ರಗಳನ್ನು ಅವರ ಕಾಲ ದೇಶಗಳಿಂದ ಬಿಡುಗಡೆಗೊಳಿಸಿ, ಅದರ ಮೂಲಕ ತಮ್ಮ ಸಮಕಾಲೀನ ಸಂವೇದನೆಯನ್ನು ಬಿಂಬಿಸಿರುವುದನ್ನು ಅವರ ಸಾಹಿತ್ಯ ಕೃತಿಗಳಲ್ಲಿ ಗುರುತಿಸಬಹುದಾಗಿದೆ. ಸೀತೆ, ಅಹಲ್ಯೆ, ದ್ರೌಪದಿ, ಮಂಡೋದರಿ, ಮಂಥರೆ ಮೊದಲಾದವರಿಗೆ ಹೊಸ ದನಿಯನ್ನು ನೀಡಿದ್ದಾರೆ. ಅವರ ವರ್ತನೆಗಳನ್ನು ಪ್ರಶ್ನಿಸಿ, ಅವರನ್ನು ತಮ್ಮ ಕಾವ್ಯದಲ್ಲಿ ಪುನರ್ ರೂಪಿಸಿದ್ದಾರೆ. ರಾಮಾಯಣದಲ್ಲಿ ಅವಜ್ಞೆಗೆ ಒಳಗಾದ ಊರ್ಮಿಳೆ, ಮಂಡೋದರಿ, ಮಂಥರೆಯಂಥವರಿಗೆ ಕುವೆಂಪುರವರು ತಮ್ಮ ಶ್ರೀ 'ರಾಮಾಯಣದರ್ಶನಂ' ಮಹಾಕಾವ್ಯದಲ್ಲಿ ಹೊಸ ಅಸ್ತಿತ್ವವನ್ನು ಸ್ಥಾಪಿಸಿದ್ದಾರೆ.

ಕುವೆಂಪುರವರು ಕವನಗಳಲ್ಲಿ ಕಟ್ಟಿಕೊಡುವ ಸ್ತ್ರೀಯರ ಸ್ಥಾನವು ಬಹುಮುಖ್ಯದುದಾಗಿದೆ. "ಸ್ವರ್ಗದ್ವಾರದಿ ಯಕ್ಷ ಪ್ರಶ್ನೆ" ಎಂಬುದು ವ್ಯಕ್ತಿನಿಷ್ಠವಾದ ಹಾಗೂ ಸ್ತ್ರೀ ಪರವಾದ ಒಂದು ಕವನ, ಕವಿಯ ವೈಯಕ್ತಿಕ ಹಾಗೂ ಭಾವಾನಾತ್ಮಕ ತುಡಿಗಳನ್ನು ದಾಖಲಿಸುತ್ತದೆ. ಕವಿಯು ಕನಸಿನಲ್ಲಿ ಸ್ವರ್ಗಕ್ಕೆ ಹೋದಾಗ ಅಲ್ಲಿಯ ದ್ವಾರಪಾಲಕ ಯಾರು ಎಂದು ಪ್ರಶ್ನಿಸುತ್ತಾನೆ. ಕವಿ ತನ್ನ ಹೆಸರು, ಗಳಿಸಿರುವ ಪದವಿ, ಅಲಂಕರಿಸಿದ ಸ್ಥಾನ ಇತ್ಯಾದಿಗಳನ್ನು ಪರಿಚಯಿಸಿಕೊಳ್ಳುತ್ತಾರೆ. ಆದರೂ ಬಾಗಿಲು ತೆರೆಯುವುದಿಲ್ಲ. ದ್ವಾರಪಾಲಕ ಬಳಗವನ್ನು ಶೋಧಿಸಿ ಉತ್ತರಿಸುವಂತೆ ಕಟ್ಟು

ವಿಧಿಸುತ್ತಾನೆ. ತೀರಾ ಯೋಚಿಸಿ ಕವಿ ಕೊನೆಗೆ ತಾನು "ಹೇಮಿಗಂಡ" ಎನ್ನುತ್ತಾರೆ. ಆಗ ಸ್ವರ್ಗದ ಬಾಗಿಲು ತೆರೆದುಕೊಳ್ಳುತ್ತದೆ. ಇದು ಈ ಕವಿತೆಯ ಕಥೆ. ಕುವೆಂಪುರವರಿಗೆ ಅವರ ಹೆಂಡತಿ ಹೇಮಾವತಿಯೇ ಸ್ಫೂರ್ತಿಯ ಸೆಲೆಯಾಗಿದ್ದರು. ಇವರ ಅಭಿವ್ಯಕ್ತಿಯ ತಳಹದಿಯು ಸ್ತ್ರೀ ನೆಲೆಯದ್ದೇ ಆಗಿದೆ ಎಂಬುದಕ್ಕೆ ಈ ಕವನ ಉತ್ತಮ ನಿದರ್ಶನವಾಗಿದೆ. ಈ ಪದ್ಯ ನೋಡಲು ಸರಳವಾಗಿದ್ದರೂ ಇಲ್ಲಿ 'ಹೇಮಿಗಂಡ' ಎಂದು ಗುರುತಿಸಿಕೊಳ್ಳುವ ಕವಿಯ ಅಂತರಂಗ ಸ್ತ್ರೀಯಾತ್ಮಕವಾಗಿದೆ. ಅಲ್ಲದೆ ಕೇವಲ ಸ್ತ್ರೀಯರ ಸಂವೇದನೆಯನ್ನೇ ದೃಷ್ಟಿಯಲ್ಲಿಟ್ಟು ಸ್ತ್ರೀ ಪರವಾದ ಧೋರಣೆಗಳನ್ನು ಹೇಳದೆ, ಸ್ತ್ರೀ–ಪುರುಷರಿಬ್ಬರೂ ಸಮಾನವಾಗಿರುವ ಸಂವೇದನೆಗಳನ್ನು ತಮ್ಮ ಕೃತಿಗಳಲ್ಲಿ ರೂಪಿಸಿದ್ದಾರೆ. ಅದಕ್ಕಿಂತ ಮುಖ್ಯವಾಗಿ ಕೆಲವು ಸನ್ನಿವೇಶಗಳಲ್ಲಿ ತಾನು ಹೆಣ್ಣಾಗಿ ಮತ್ತೊಂದು ಹೆಣ್ಣಿನ ಅನುಭವಲೋಕವನ್ನು ಪ್ರವೇಶಿಸಿ ಸ್ತ್ರೀಯೊಬ್ಬಳ ಪ್ರಬಲವಾದ ಸಂವೇದನೆಗಳನ್ನು ಪ್ರಕಟಪಡಿಸುತ್ತಾರೆ. ಇದಕ್ಕೆ ಉತ್ತಮ ನಿದರ್ಶನವೆಂದರೆ: 'ಶ್ರೀ ರಾಮಾಯಣದರ್ಶನಂ' ಕಾವ್ಯದಲ್ಲಿ ಬರುವ ಶಿಲಾತಪಸ್ವಿನಿಯ ಸನ್ನಿವೇಶ.

ಕುವೆಂಪುರವರು ಇದರಿಂದ ಪ್ರೇರಣೆಹೊಂದಿ 'ಊರ್ಮಿಳಾದೇವಿ' 'ಶಿಲಾತಪಸ್ವಿ', 'ಮನೆಮನೆಗೆ ತಪಸ್ವಿನಿ' ಎಂದು ಸ್ತ್ರೀ ಕೇಂದ್ರಿತ ನೆಲೆಯಲ್ಲಿ ಹಲವಾರು ಕವನಗಳನ್ನು ರಚಿಸಿದ್ದಾರೆ. ಪರಂಪರೆಯಲ್ಲಿ ಕೇಂದ್ರಕ್ಕೆ ಬರದೆ ಮೂಲೆಯಲ್ಲಿದ್ದುಕೊಂಡೇ ತಮ್ಮ ಜೀವನ ನಡೆಸಿ ಇತರರ ಆತ್ಮೋದ್ಧಾರಕ್ಕಾಗಿ ಶ್ರಮಿಸಿದ ಈ ಪಾತ್ರಗಳು ಕುವೆಂಪು ಸಾಹಿತ್ಯದಲ್ಲಿ ಮುಂಚೂಣಿಗೆ ಬರುತ್ತವೆ.

ಸ್ತ್ರೀ ಪುರುಷರಿಬ್ಬರೂ ಈ ಸೃಷ್ಟಿಗೆ ಕಾರಣಕರ್ತರು ಎಂದು ಲಿಂಗಸಮಾನತೆಯ ಸ್ತ್ರೀವಾದವನ್ನು ಅವರ 'ಹರಿಗಿರಿಜಾ' ಎಂಬ ಪದ್ಯದಲ್ಲಿ ಮಂಡಿಸುತ್ತಾರೆ.

*' ಸರ್ವಜೀವ ಜಡಗಳಲ್ಲಿ*
*ನೀವೇ ಗಂಡು ನಾನೇ ಹೆಣ್ಣು*
*ಸಕಲ ಸೃಷ್ಟಿ ಮೂಲದಲ್ಲಿ*
*ಪುರುಷ ಪ್ರಕೃತಿ ಎರಡೂ ಕಣ್ಣು*
*ಶಿವಶಕ್ತಿ; ಶಕ್ತಿಶಿವ*
*ಮಿಲನದಾಟವದುವೆ ಭವ"*

ಎಂದು ಪುರುಷ ಪ್ರಕೃತಿಯ ನಡುವಿನ ಒಳ ಸಂಬಂಧದ ಸತ್ಯವನ್ನು ತಿಳಿಸುತ್ತಾರೆ.

ಕುವೆಂಪುರವರ ಕೆಲವು ಕಥನ ಕವನಗಳೂ ಹೆಣ್ಣಿನ ಸಮಸ್ಯೆಯನ್ನು ಕೇಂದ್ರವಾಗಿಸಿಕೊಂಡು ಚರ್ಚಿಸುತ್ತವೆ. ಬಾಲ್ಯವಿವಾಹ, ವಿಧವಾ ಸಮಸ್ಯೆ, ಹೆಣ್ಣಿನ ಮಾನಸಿಕ ತೊಳಲಾಟಗಳಂಥ ಮುಖ್ಯ ಸ್ತ್ರೀಪರವಾದ ಸಾಮಾಜಿಕ ಸಮಸ್ಯೆಗಳನ್ನು ಚರ್ಚಿಸಿದ್ದಾರೆ. ಸ್ತ್ರೀಯರ ಸ್ಥಿತಿಗತಿಗಳು ದುರಂತವಾಗಲು ಕಾರಣರಾರು? ಅಪರಾಧಿಯಾರು? ಎಂಬ ಪ್ರಶ್ನೆಯನ್ನು ಹಾಕಿ, ನಮ್ಮನ್ನು ಚಿಂತನೆಗೆ ಹಚ್ಚುತ್ತಾರೆ. 'ಬಾಲವಿಧವೆ' ಈ ಕವನವು ಒಂದು ಹೆಣ್ಣಿನ ಮನೋವೇದನೆಯನ್ನು ಸೂಕ್ಷ್ಮನೆಲೆಯಲ್ಲಿ ಕಟ್ಟಿಕೊಡುತ್ತದೆ. ಇಲ್ಲಿ ಬಾಲ ವಿಧವೆ ಬದುಕಿನ ಸಂಕಟಗಳಿಗೆ ನೊಂದು ಬೆಂದು ಆತ್ಮಹತ್ಯೆಮಾಡಿಕೊಳ್ಳುತ್ತಾಳೆ. ಇವಳು ತೀರ್ಮಾನಿಸಿರುವ

ಆತ್ಮಹತ್ಯೆಯ ನಿರ್ಧಾರದ ಹಿಂದೆ ಪರಲೋಕದಲ್ಲಿಯಾದರೂ ಪತಿಯನ್ನು ಪಡೆಯಬೇಕೆಂಬ ಹಂಬಲವಿದೆ. ಆದರೆ ಅವಳ ಈ ಸ್ಥಿತಿಗೆ ಕಾರಣವಾದ ಧರ್ಮ, ಪುರೋಹಿತಶಾಹಿ ಯಜಮಾನ್ಯಗಳನ್ನು ವಿಮರ್ಶೆಯ ಒರೆಗೆ ಹಚ್ಚುತ್ತಾರೆ:

*"ಧರ್ಮ ಶಾಸ್ತ್ರಜ್ಞರೇ ಬನ್ನಿ ಧರ್ಮ ತೋರಿ!*
*ನೀತಿಯಲಿ ಪಂಡಿತರೆ ಬನ್ನಿ ದಾರಿಯತೋರಿ?*
*ದಾರಿಯನು ಎರೆದವನೆ ಜೊಯಿಸನೆ ಬಾ ಈಗ*
*ಕರೆ ನಿನ್ನ ಸಾಕ್ಷಿಗಳ! ಅಪರಾಧಿಯಾರು?*
*ಇದನ್ನೆಲ್ಲ ಸರಿಯೆಂದು ಹೊಗಳುವ ಸಮಾಜವೇ*
*ಎಲ್ಲಿ ಗೊರಕೆ ಹೊಡೆವೆ? ಬಾ ಬೇಗ ಇಲ್ಲಿ!*
*ಇಲ್ಲಿ ನ್ಯಾಯಸ್ಥಾನ! ಇಲ್ಲಿ ಧರ್ಮವ ಹೇಳು"* [4]

ಹೆಣ್ಣಿನ ದುರಂತಕ್ಕೆ ಕಾರಣವಾದ ಈ ಪಾರಂಪರಿಕ ಸಮಾಜದ ಬಗ್ಗೆ ಇಲ್ಲಿ ಅಪಾರ ಕೋಪ ವ್ಯಕ್ತವಾಗುತ್ತದೆ. ಸಮಾಜದ ಕಟ್ಟುಪಾಡುಗಳನ್ನು ಪ್ರಶ್ನಿಸುವುದರ ಜೊತೆಗೆ ಹೆಣ್ಣಿಗೆ ಸಾಮಾಜಿಕ ನ್ಯಾಯವನ್ನು ಕೊಡುವಂತೆ ಆದೇಶಿಸುತ್ತಾರೆ. ಸಾಮಾನ್ಯ ಹೆಣ್ಣೊಬ್ಬಳು ಹೊಸ ಎಚ್ಚರದಲ್ಲಿ ಎದ್ದು ನಿಲ್ಲುವಂತಾದರೆ ಮಾತ್ರ ಮಹಿಳಾ ವಿಮೋಚನೆ ಸಾಧ್ಯ ಎಂಬ ನಿಲುವು ಈ ಪದ್ಯದಲ್ಲಿ ವ್ಯಕ್ತಗೊಂಡಿದೆ.

ನವೋದಯ ಕಾಲದ ಮಹತ್ವದ ಪ್ರೇರಣೆಗಳಲ್ಲಿ ರಾಷ್ಟ್ರಪ್ರೇಮವು ಮಹತ್ವದ್ದಾಗಿತ್ತು. ಕುವೆಂಪುರವರ ಸಾಹಿತ್ಯದಲ್ಲಿ ಭಾರತಾಂಬೆ, ಕನ್ನಡಾಂಬೆ, ಕನ್ನಡ ಭುವನೇಶ್ವರಿ, ಕನ್ನಡತಾಯಿ ಮೊದಲಾದ ಕಲ್ಪನೆಗಳು ಮಾತೃ ಸ್ವರೂಪದ್ದಾಗಿವೆ. ಸರ್ವರನ್ನು ಪೋಷಿಸುತ್ತಿರುವವಳು; ಮೂಲಾಧಾರವಾಗಿರುವವಳು ಹೆಣ್ಣೇ ಎಂಬುದು ಅವರ ಅಭಿಪ್ರಾಯ:

*"ನಿನ್ನ ಕಂಗಳ ಪುಣ್ಯಕಾಂತಿಯೊಳೆನ್ನ ಕಂಗಳ ತೆರೆದನು*
*ನಿನ್ನ ಅಂಕದ ಮಂಗಳಾಂಗಣದಲ್ಲಿ ನಲಿಯುತ ಮೆರೆದೆನು;*
*ನಿನ್ನ ಮೈಮೆಯ ಬರೆವೆನು; ನಿನ್ನ ಹೆಸರದೆ ಕರೆವೆನು;*
*ನಿನ್ನ ಸೇವೆಯೊಳಳಿವ ಭಾಗ್ಯಕ್ಕೆ ಸಕಲ ಭಾಗ್ಯವ ತೊರೆವೆನು"* [5]

ಈ ಭಾರತಮಾತೆಯ ಸೇವೆಗಾಗಿ ಸಕಲ ತ್ಯಾಗಕ್ಕೂ ತಾನು ಸಿದ್ಧನೆಂಬ ಧೋರಣೆ ಈ ಕವನದಲ್ಲಿ ವ್ಯಕ್ತವಾಗುತ್ತದೆ. ನಾಡಗೀತೆಯಲ್ಲಿ ಕರ್ನಾಟಕವನ್ನು 'ಭಾರತ ಜನನಿಯ ತನುಜಾತೆ' ಎಂದು ಸಂಭೋಧಿಸಿದ್ದಾರೆ. ಅವರ ಕವನಗಳಲ್ಲಿ ನಾವು ಗುರುತಿಸುವ ಮುಖ್ಯ ಅಂಶವೆಂದರೆ ಪ್ರಕೃತಿಯನ್ನು ಸ್ತ್ರೀ ರೂಪದಲ್ಲಿ ಚಿತ್ರಿಸಿರುವುದು. ಅವರು ಪ್ರಕೃತಿಯಲ್ಲಿ ಚೈತನ್ಯಾರೋಪಣೆ ಮಾಡುತ್ತಾರೆ. ಅವರು ಜಗನ್ಮಾತೆಯ ಕಲ್ಪನೆಯು ಜಗತ್ತನ್ನು ಪೋಷಿಸುವ ಶಕ್ತಿಯಾಗಿ, ಸ್ತ್ರೀ ಚೈತನ್ಯದಾಯಕಿಯಾಗಿ ಅಭಿವ್ಯಕ್ತಗೊಂಡಿದೆ.

ಕುವೆಂಪು ಅವರ ಕಥಾ ಸಾಹಿತ್ಯದಲ್ಲೂ ಸಹ ಸ್ತ್ರೀ ಸಹಜ ತುಮುಲ, ತೊಳಲಾಟ, ನಂತರ ಅರಿವಿನ ಪ್ರಬುದ್ಧತೆ ಇವೆಲ್ಲವನ್ನು ಕಾಣಬಹುದಾಗಿದೆ. 'ಸಂನ್ಯಾಸಿ', 'ಮೀನಾಕ್ಷಿಯ ಮನೇ ಮೇಸ್ಟರು' ಮತ್ತು 'ನನ್ನ ದೇವರು' ಈ ಕಥೆಗಳಲ್ಲಿ ಸ್ತ್ರೀಯರ ಮನೋಘರ್ಷಣೆಯನ್ನು, ಅತ್ಯಂತ ಸೂಕ್ಷ್ಮ ಸಂವೇದನೆಗಳನ್ನು ಗುರುತಿಸಬಹುದಾಗಿದೆ.

'ಸಂನ್ಯಾಸಿ' ಕಥೆಯಲ್ಲಿ ಬರುವ ಯುವಕನಿಗೆ ಬದುಕಿನ ಬಗ್ಗೆ, ಮದುವೆಯ ಬಗ್ಗೆ ಅಸಹನೆ ಇದೆ. ತಾನು ಬಲವಂತದಿಂದ ಮದುವೆಯಾದ 'ಇಂದಿರೆ' ಎಂಬ ಹುಡುಗಿಯನ್ನು ಬಿಟ್ಟು ಸಂನ್ಯಾಸತ್ವ ಸ್ವೀಕರಿಸುತ್ತಾನೆ. ಆದರೆ ಯಾವ ತಪ್ಪೂ ಮಾಡದ ಇಂದಿರಾಗೆ ತನ್ನ ಬದುಕಿನ ಬಗ್ಗೆ ಪ್ರಶ್ನೆ ಬಂದಾಗ ಹೇಗಾದರೂ ಹೋರಾಡಿ ತನ್ನ ಪತಿಯನ್ನು ಒಲಿಸಿಕೊಳ್ಳುವ ಪ್ರಯತ್ನ ಮಾಡಿ ಯಶಸ್ವಿಯಾಗುತ್ತಾಳೆ. ತನ್ನ ಗಂಡನ ಮಾರ್ಗವನ್ನು ಅನುಸರಿಸುತ್ತಾಳೆ. 'ಮುಕುಂದ' ಎಂಬ ಗಂಡಸಿನ ವೇಷ ಧರಿಸಿ ಅವನ ಗುರುಗಳ ಶಿಷ್ಯಳಾಗಿ ಬಂದು ಗಂಡನ ಸ್ನೇಹವನ್ನು ಸಂಪಾದಿಸುತ್ತಾಳೆ. ಇಬ್ಬರೂ ಪ್ರೇಮಾನಂದರ ಶಿಷ್ಯರಾಗಿ ಬಹಳ ಆತ್ಮೀಯರಾಗುತ್ತಾರೆ. ಕೊನೆಗೆ ನಿಜ ಸ್ವರೂಪವನ್ನು ಬಯಲು ಮಾಡಿ ಇಂದಿರೆ ಗುರುವಿನ ಮುಂದೆ ಪತಿಭಿಕ್ಷೆಯನ್ನು ಬೇಡುತ್ತಾಳೆ; ಪತಿಯನ್ನು ಪಡೆಯುತ್ತಾಳೆ. ಇದು ಈ ಕಥೆಯ ವಸ್ತು. ಮದುವೆಯ ಬಗ್ಗೆ ಸುಂದರ ಆಸೆ ಹೊತ್ತ ಒಂದು ಹೆಣ್ಣು ತನ್ನ ಗಂಡ ಸಂನ್ಯಾಸ ಸ್ವೀಕರಿಸಿದರ ಆಘಾತಕ್ಕೆ ಒಳಗಾಗಿ ಆತನನ್ನು ಮರಳಿ ಸಂಸಾರಕ್ಕೆ ಕರೆತರಲು ಪ್ರಯತ್ನಿಸುವ ಹೆಣ್ಣಿನ ಹೋರಾಟ ಅತ್ಯಂತ ಮಹತ್ವದ್ದಾಗಿದೆ. ದಿಕ್ಕು ತಪ್ಪುತ್ತಿದ್ದ ಬಾಳನ್ನು ಮತ್ತೆ ಸರಿದಾರಿಗೆ ತರುವಲ್ಲಿ ಹೆಣ್ಣೊಂದರ ಹೋರಾಟ ಈ ಕಥೆಯ ವೈಶಿಷ್ಟ್ಯವಾಗಿದೆ.

'ನನ್ನ ದೇವರು' ಕಥೆಯಲ್ಲಿ ಹೆಣ್ಣೊಬ್ಬಳ ಮನಸ್ಸಿನ ಭಾವನೆಗಳನ್ನು ಮನೋವೈಜ್ಞಾನಿಕ ನೆಲೆಯಲ್ಲಿ ಕುವೆಂಪುರವರು ವಿಶ್ಲೇಷಿಸಿದ್ದಾರೆ. ಹೊಸದಾಗಿ ಮದುವೆಯಾದ ಒಂದು ಹೆಣ್ಣಿಗೆ ತನ್ನ ಗಂಡನ ಅನಿರೀಕ್ಷಿತ ಸಾವಿನಿಂದ ಬಂದ ವಿಧವೆಯ ಪಟ್ಟ ಅವಳನ್ನೂ ಮಾನಸಿಕವಾಗಿ ಕುಗ್ಗಿಸುತ್ತದೆ. ಬಯಕೆಗಳನ್ನು ಹತ್ತಿಕ್ಕಲಾರದೆ ತನ್ನ ಭಾವನಲ್ಲಿ ಗಂಡನನ್ನು ಕಾಣಲು ಯತ್ನಿಸುತ್ತಾಳೆ. ಆದರೆ ಅದು ತಪ್ಪು ಎಂದು ಅವಳ ನೈತಿಕತೆ ಹೇಳುತ್ತದೆ. ಹೀಗೆ ಬಯಕೆ ಹಾಗೂ ನೈತಿಕತೆಯ ನಡುವಿನ ದೊಡ್ಡ ಘರ್ಷಣೆ ಆಕೆಯ ಮನಸ್ಸಿನಲ್ಲಿ ಏರ್ಪಡುತ್ತದೆ. ಕಡೆಗೆ, ಧರ್ಮ, ದೇವರು, ಕರ್ಮ ಈ ಎಲ್ಲ ಪಾರಂಪರಿಕ ವಿಚಾರಗಳು ಅವಳ ಭಾವನೆಗಳನ್ನು ಹತ್ತಿಕ್ಕಿ ಆಕೆಯನ್ನು ನಿಯಂತ್ರಿಸಿ ಬಿಡುತ್ತವೆ. ಕೊನೆಗೆ ತನ್ನ ಭಾವನಲ್ಲಿ ದೈವತ್ವವನ್ನು ಕಾಣುವುದರೊಂದಿಗೆ ಕಥೆ ಮುಕ್ತಾಯಗೊಳ್ಳುತ್ತದೆ.

ಪುರುಷ ಪ್ರಧಾನ ಸಮಾಜದಲ್ಲಿ ಒಬ್ಬ ಪುರುಷನಿಗೆ ಈ ಬಗೆಯ ನೈತಿಕತೆಯ ತೊಳಲಾಟ ಇದ್ದರೂ ಅದು ತೀವ್ರವಾಗಿರುವುದಿಲ್ಲ. ಆದರೆ ಹೆಣ್ಣಿನ ನೆಲೆಯಲ್ಲಿ ಅದು ನೈತಿಕತೆಯ ಪ್ರಶ್ನೆಯಾಗಿ ಎದುರಾಗುತ್ತದೆ. ವಿಧವೆಯಾದ ಹೆಣ್ಣು ಪರಪುರುಷನನ್ನು ಬಯಸುವುದು ತಪ್ಪು ಎಂಬ ಪಾರಂಪರಿಕ ಭಾವನೆಗಳು ಅವಳ ಆಯ್ಕೆಯ ಸ್ವತಂತ್ರವನ್ನು, ವೈಚಾರಿಕ ಮನೋಭಾವನೆಯನ್ನು ನಿಯಂತ್ರಿಸುತ್ತವೆ. ಇದನ್ನು ಲಿಂಗರಾಜಕಾರಣದ ಹಿನ್ನೆಲೆಯಲ್ಲಿಯೂ ಗುರುತಿಸಬಹುದಾಗಿದೆ.

ಆಧುನಿಕೋತ್ತರ ಸಂದರ್ಭದಲ್ಲಿ ಪಾರಂಪರಿಕ ಸಮಾಜದಲ್ಲಿ ಯಾವುದೂ ಈ ಬಗೆಯ ಹೆಣ್ಣು ಗಂಡಿನ ಸಂಬಂಧಗಳು ಅನೈತಿಕ ಎಂದು ಕರೆಯಲಾಗುತ್ತೋ ಆ ಪ್ರಶ್ನೆಗಳು ಈ ಹೊತ್ತಿನ ಸಂದರ್ಭದಲ್ಲಿ ನೈತಿಕ ಮತ್ತು ಅನೈತಿಕ ಎಂಬ ಸಂಬಂಧದ ಪ್ರಶ್ನೆಗಳು ಇಲ್ಲ. ಹಿಂದಿನ ಅನೈತಿಕ ಮೌಲ್ಯಗಳು ಎಲ್ಲವೂ ಈಗ ಅವೇ ನೈತಿಕ ಮೌಲ್ಯಗಳಾಗಿ ಪರಿವರ್ತಿತವಾಗಿಬಿಟ್ಟಿದೆ. ಹೆಣ್ಣು ತನ್ನ ಆಯ್ಕೆಗೆ, ಮನೋಭಿವ್ಯಕ್ತಿಗಳಿಗೆ,

ವೈಚಾರಿಕತೆಗೆ ತನ್ನದೇ ಆದ ಮುಕ್ತವಾತಾವರಣವನ್ನು ಸೃಷ್ಟಿಸಿಕೊಂಡಿರುವುದನ್ನು ಗುರುತಿಸಬಹುದಾಗಿದೆ.

'ಮೀನಾಕ್ಷಿಯ ಮನೇ ಮೇಸ್ಟರು' ಈ ಕಥೆಯಲ್ಲಿ ಮೀನಾಕ್ಷಿ ಹಾಗೂ ಮೇಷ್ಟ್ರು ಇವರಿಬ್ಬರ ನಡುವಿನ ಪ್ರೇಮ ಏಕಮುಖವಾದುದು. ಚಂಚಲ ಹಾಗೂ ಸಿಡುಕು ಸ್ವಭಾವವುಳ್ಳ ಮೀನಾಕ್ಷಿಯನ್ನು ವಯಸ್ಸಾದವನಿಗೆ ಎರಡನೆಯ ಹೆಂಡತಿಯಾಗಿ ಮದುವೆಮಾಡುತ್ತಾರೆ. ಮೀನಾಕ್ಷಿ ಸಹಜವಾಗಿ ಅನ್ಯೋನ್ಯದಿಂದ ಹೊಂದುಕೊಂಡು ಸಂಸಾರ ನಡೆಸುತ್ತಿರುತ್ತಾಳೆ. ಮೇಷ್ಟರರು ಅವಳ ಗಂಡನನ್ನು ಕೊಂದು ಅವಳನ್ನು ಪಡೆಯಲು ಚಾಕುವಿನೊಡನೆ ಅವಳ ಮನೆಗೆ ಬಂದಾಗ ಅವರ ಅನ್ಯೋನ್ಯತೆಯನ್ನು ಕಂಡು ಮೇಷ್ಟರ ಮನಸ್ಸು ಪರಿವರ್ತನೆಯಾಗುತ್ತದೆ. ಇದಕ್ಕೆ ಕಾರಣ ಅವಳು ಹಳೆಯದನ್ನು ಮರೆತು ಪತಿಯಲ್ಲಿ ಹೊಂದಿಕೊಂಡು ಇರುವುದು. ದುರುದ್ದೇಶದಿಂದ ಬಂದಿದ್ದ ಮೇಸ್ಟ್ರಿಗೆ ಅವಳ ವರ್ತನೆಯೇ ಪಾಠವಾಗುತ್ತದೆ. ತಂದಿದ್ದ ಚಾಕುವನ್ನು ಬಹುಮಾನವಾಗಿ ಕೊಟ್ಟು ಹೊರಟುಹೋಗುತ್ತಾನೆ. ಹೀಗೆ ಕುವೆಂಪುರವರ ಕೃತಿಯಲ್ಲಿ ಸ್ತ್ರೀ ಪುರುಷ ಸಂಬಂಧಗಳು ಸಾಮರಸ್ಯವನ್ನು ಕಂಡುಕೊಳ್ಳುತ್ತವೆ. ಆತ್ಮಾವಲೋಕನ, ಆತ್ಮ ವಿಮರ್ಶೆಗಳಿಗೆ ಒಳಗಾಗಿ ವ್ಯಕ್ತಿಗಳು ಅನುಸಂಧಾನ ಹಾಗೂ ಸಾಮರಸ್ಯದ ದಾರಿ ಹಿಡಿಯುತ್ತಾರೆ.

"ಕುವೆಂಪುರವರು ಹೆಣ್ಣನ್ನು ಸಮಗ್ರ ನೆಲೆಯಲ್ಲಿ ಪರಿಭಾವಿಸುತ್ತಾರೆ. ಆಕೆಯನ್ನು ಪ್ರಕೃತಿಯೊಂದಿಗೆ ಸಮೀಕರಿಸುವ ಮೂಲಕ ಹೊಸ ವ್ಯಾಖ್ಯಾನವನ್ನು ಮಾಡುತ್ತಾರೆ. ಕುವೆಂಪು ಅವರ ಪಾಲಿಗೆ ಪ್ರಕೃತಿ ಬದುಕಿನ ಜೀವನ ಮೌಲ್ಯ, ಅಭಿವ್ಯಕ್ತಿಯ ಮೂಲಧಾತು, ಚೈತನ್ಯ, ಸ್ಫೂರ್ತಿ ಎಲ್ಲಾ. ಅವರಿಗೆ ಪ್ರಕೃತಿ ಬೇರೆ ಅಲ್ಲ, ಹೆಣ್ಣು ಬೇರೆಯಲ್ಲ. ನಿಸರ್ಗ, ಭೂಮಿ, ನದಿ, ಭಾಷೆ, ಶಾರದಾದೇವಿ, ಭಾರತಾಂಬೆ ಎಲ್ಲರಲ್ಲೂ ಹೆಣ್ಣನ್ನು ಕಾಣುತ್ತಾರೆ. ತಳಿರು, ಹಣ್ಣು, ಹೂ ಎಲ್ಲವೂ ತಾಯಿಯ ಪ್ರತೀತಗಳೇ, ಪ್ರತಿರೂಪಗಳೇ. ಕುವೆಂಪು ಹೆಣ್ಣನ್ನು ಅಖಂಡ ನೆಲೆಯಲ್ಲಿ ಕಾಣಿಸುತ್ತಾರೆಂಬುದಕ್ಕೆ ಇವು ಸಾಕ್ಷಿಗಳಾಗುತ್ತವೆ. (ಪ್ರಕೃತಿಗೆ ಜಗತ್ತನ್ನು ಪೊರೆಯುವಂಥ ಶಕ್ತಿ ಇರುವಂತೆ ಹೆಣ್ಣಿಗೆ ಮನುಕುಲವನ್ನು ಬೆಳೆಸುವ, ಸಂರಕ್ಷಿಸುವ ಶಕ್ತಿಯೂ ಇದೆ.) ಪ್ರಕೃತಿ ಋತುಮಾನಕ್ಕನುಗುಣವಾಗಿ ಅನೇಕ ಆಯಾಮಗಳನ್ನು ಪಡೆದುಕೊಂಡರೆ; ಹೆಣ್ಣು ವಯೋಮಾನಕ್ಕನುಸಾರವಾಗಿ ಅನೇಕ ಸ್ಥಿತ್ಯಂತರಗಳನ್ನು ಪಡೆದುಕೊಳ್ಳುತ್ತಾ, ಉದಾತ್ತತೆಯ ಶಕ್ತಿಯಾಗಿದ್ದಾಳೆ. ಒಟ್ಟು ನೆಲೆಯಲ್ಲಿ ದೈವಿಶಕ್ತಿಯಾಗಿ ಬದುಕಿನ ಒಳಿತಿನ ಸಂಕೇತವಾಗಿದ್ದಾಳೆ' ಕುವೆಂಪು ವ್ಯಕ್ತಿತ್ವದ ಮೊತ್ತವಾಗಿದ್ದಾಳೆ"[6] ಎಂದು ಪ್ರೊ॥ ಪದ್ಮಾಶೇಖರ್‌ರವರು ಕುವೆಂಪುರವರ ಸ್ತ್ರೀವಾದಿ ನೆಲೆಗಳ ಬಗೆಗಿನ ವಿಚಾರಗಳನ್ನು ಸ್ಪಷ್ಟಪಡಿಸುತ್ತಾರೆ.

ಕುವೆಂಪುರವರು ರಚಿಸಿರುವ 'ಕಾನೂರು ಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳು ಸ್ತ್ರೀವಾದಿ ದೃಷ್ಟಿಕೋನ, ಸ್ತ್ರೀತ್ವದ ಹೊಸ ನಿರ್ವಚನವನ್ನು ಕಟ್ಟಿಕೊಡುವ ಸಾಂಸ್ಕೃತಿಕ ಕೃತಿಗಳಾಗಿವೆ. ಈ ಕಾದಂಬರಿಗಳ ಶೀರ್ಷಿಕೆಯೇ ಮಹಿಳಾ ಸಂಕಥನದ ಪ್ರಾಧ್ಯಾನ್ಯತೆಯನ್ನು ಹೊಂದಿವೆ. ಹಾಗೂ ಇದರಲ್ಲಿ ವೈಯಕ್ತಿಕ ಹಾಗೂ ಸಾಮಾಜಿಕ ಸ್ಥಿತ್ಯಂತರಗಳ ಚಿತ್ರಣವಿದೆ. ಹೀಗೆ ಪಾರಂಪರಿಕ ಮೌಲ್ಯಗಳು ಗಾಢವಾದ ತಮ್ಮ ಪ್ರಭಾವನ್ನು ಬೀರುತ್ತಾ ಹೆಣ್ಣನ್ನು

ನಿಯಂತ್ರಿಸುವ ಪ್ರಯತ್ನವನ್ನು ಮಾಡುತ್ತಾ ಬಂದಿರುವುದನ್ನು ಕಾಣುತ್ತೇವೆ. ಆದರೆ ಈ ಬಗೆಯ ಮೌಲ್ಯಗಳನ್ನು ಧಿಕ್ಕರಿಸಿ ಹೊಸನೆಲೆಯಲ್ಲಿ, ಅಲೋಚನೆಯಲ್ಲಿ ಚಲಿಸುವ ಸ್ತ್ರೀಪಾತ್ರಗಳನ್ನು ಅವರ ಕಾದಂಬರಿಗಳಲ್ಲಿ ಗುರುತಿಸಬಹುದಾಗಿದೆ. ಹೀಗೆ ಕುವೆಂಪುರವರು ಭೂತವನ್ನು ಶೋಧಿಸುತ್ತ, ವರ್ತಮಾನವನ್ನು ಹೊಸದಾಗಿ ಕಟ್ಟುವ ಪ್ರಯತ್ನ ಮಾಡುತ್ತಾರೆ. ಅಂದರೆ "ಸಂಸ್ಕೃತಿಯಲ್ಲಿ ಹೆಣ್ಣಿಗಾದ ಅನ್ಯಾಯಗಳನ್ನು ಸರಿಪಡಿಸುತ್ತಲೇ, ಸ್ತ್ರೀತ್ವದ ಸಾಧ್ಯತೆಗಳನ್ನು ಉನ್ನತೀಕರಿಸುತ್ತಾರೆ. ಮನಶ್ಶಾಸ್ತ್ರೀಯವಾದ ಮುನ್ನೋಟ ಹರಿಸುತ್ತಲೇ ವ್ಯವಸ್ಥೆಯೊಳಗಿನ ತಲ್ಲಣ, ಆತಂಕಗಳಿಂದ ತಳಮಳಿಸುವ ಸ್ತ್ರೀ ಮನಸ್ಸಿಗೆ ಬದುಕಿನ ಭರವಸೆಯನ್ನು ತುಂಬುತ್ತಾರೆ"[7] ಎನ್ನುವ ಪ್ರೊ॥ ಪದ್ಮಾ ಶೇಖರ್‌ರವರು, ಕುವೆಂಪುರವರ ಸಾಹಿತ್ಯದಲ್ಲಿ ಹೆಣ್ಣನ್ನು ಮನೋವೈಜ್ಞಾನಿಕವಾಗಿ ನೋಡುವ ನೆಲೆ ಮುಖ್ಯವಾಗುತ್ತದೆಂದು ತಿಳಿಸುತ್ತಾರೆ.

'ಕಾನೂರು ಹೆಗ್ಗಡತಿ' ಕಾದಂಬರಿಯಲ್ಲಿ ಸುಬ್ಬಮ್ಮನ ಪಾತ್ರ ನಮ್ಮ ಗಮನ ಸೆಳೆಯುತ್ತದೆ. ಸುಬ್ಬಮ್ಮನಲ್ಲದೆ ಇಲ್ಲಿ ಬರುವ ಇತರ ಸ್ತ್ರೀ ಪಾತ್ರಗಳೂ ಸಹ ವಾಸ್ತವ ಜೀವನದ ಆಧಾರದ ಮೇಲೆ ನಿರ್ಮಿತವಾಗಿವೆ. ಸುಬ್ಬಮ್ಮ ತನ್ನ ಚಿಕ್ಕ ವಯಸ್ಸಿನಲ್ಲಿ ಹಿರಿಯನಾದ ಚಂದ್ರಯ್ಯ ಗೌಡನ ನಾಲ್ಕನೆ ಹೆಂಡತಿಯಾಗಿ ಬರುತ್ತಾಳೆ. ಇವಳು ಎದುರಿಸುವ ದ್ವಂದ್ವಗಳು ಮುಖ್ಯವಾಗುತ್ತವೆ. ಬಡತನದಿಂದ ಬಂದ ಹೆಣ್ಣಾದ ಸುಬ್ಬಮ್ಮ ಶ್ರೀಮಂತಿಯ ಹೊಸ ಜಾಗದಲ್ಲಿ ತನ್ನ ಅಧಿಕಾರವನ್ನು ಚಲಾಯಿಸಲು ಇಷ್ಟ ಪಡುತ್ತಾಳೆ. ಇದಾಗದಿದ್ದಾಗ ಅವಳ ಸಿಟ್ಟು, ಸಿಡುಕು ಇವೆಲ್ಲಾ ಶಾಂತವಾದ ಮನೆಯ ವಾತಾವರಣಕ್ಕೆ ಭಂಗವನ್ನು ತರುತ್ತವೆ. ಸುಬ್ಬಮ್ಮ ಬದಲಾದ ತನ್ನ ಜೀವನ ಕ್ರಮದಿಂದ ಇಬ್ಬಂದಿತನವನ್ನು ಅನುಭವಿಸುತ್ತಾಳೆ. ಹೊಸಬಗೆಯ ಬದುಕಿನ ಕ್ರಮಕ್ಕೆ ಹೊಂದಿಕೊಳ್ಳಲಾರದೆ ಕಾದಂಬರಿಯುದ್ದಕ್ಕೂ ಚಡಪಡಿಸುತ್ತಾಳೆ.

ಸುಬ್ಬಮ್ಮ ತನ್ನ ಮನದಲ್ಲೇ ಒಂದು ರೀತಿಯ ಕೀಳರಿಮೆಯನ್ನು ಅನುಭವಿಸುತ್ತಿರುತ್ತಾಳೆ. ಚಂದ್ರಯ್ಯಗೌಡನ ಸಂಶಯಕ್ಕೆ ಗುರಿಯಾಗಿ ಅವನಿಂದ ದೇಹಿಕವಾಗಿ ಹಿಂಸೆಯನ್ನೂ ಅನುಭವಿಸುತ್ತಾಳೆ. ಕಾನೂರಿಗೆ ಬಂದ ಸುಬ್ಬಮ್ಮ ಎದುರಿಸಿದ ಮಾನಸಿಕ ಹಾಗೂ ದೈಹಿಕ ಹಿಂಸೆಗಳು ಆಕೆಯನ್ನು ಹಣ್ಣು ಮಾಡುತ್ತವೆ. ಆದರೆ ಸುಬ್ಬಮ್ಮ ಎಲ್ಲೂ ಸೋಲುವುದಿಲ್ಲ. ಎಲ್ಲವನ್ನೂ ಪ್ರತಿಭಟಿಸುತ್ತಲೇ ಎದುರಿಸುತ್ತಾಳೆ. ಸುಬ್ಬಮ್ಮ ಕೊನೆಗೆ ತನ್ನ ಪ್ರವೃತ್ತಿಯನ್ನು ಬಿಟ್ಟು ಹೊಸ ಬದುಕಿಗೆ ಹೊಸ ಬದಲಾವಣೆಗೆ ತೆರೆದುಕೊಳ್ಳುತ್ತಾಳೆ. ತನ್ನ ಗಂಡನ ಮರಣದನಂತರ 'ಹೆಗ್ಗಡತಿ'ಯ ಪಾತ್ರವನ್ನೂ ಜವಾಬ್ದಾರಿಗಳನ್ನು ಸಮರ್ಥವಾಗಿ ನಿರ್ವಹಿಸುತ್ತಾಳೆ. ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀಯಾಗಿ ಒಬ್ಬ ಪುರುಷನಂತೆ ಎಲ್ಲ ಜವಾಬ್ದಾರಿಗಳನ್ನು ಹೊತ್ತು ನಿಜವಾದ ಹೆಗ್ಗಡತಿಯಾಗುತ್ತಾಳೆ. ಊಳಿಗಮಾನ್ಯ ವ್ಯವಸ್ಥೆಯಲ್ಲಿ ಸ್ತ್ರೀಗೆ ಯಾವ ಪ್ರಮುಖ ಸ್ಥಾನಮಾನಗಳು ಇಲ್ಲದಿರುವಾಗ ಅದನ್ನು ಪಡೆಯುವ ಸುಬ್ಬಮ್ಮ ದಿಟ್ಟ ಮಹಿಳೆಯಾಗಿ ಕಾಣಿಸಿಕೊಳ್ಳುತ್ತಾಳೆ. ಚಂದ್ರಯ್ಯಗೌಡನಿಂದ ಅಸುಖಿಯಾದ ಸುಬ್ಬಮ್ಮ ಸೇರೆಗಾರ ರಂಗಪ್ಪನೊಂದಿಗೆ ಕೂಡುತ್ತಾಳೆ. ಇದು ಒಂದು ಕಾರಣವಾದರೆ, ಸಮಾಜದಿಂದ ಆಕೆ ಎದುರಿಸುತ್ತಿದ್ದ 'ಹುಟ್ಟು ಬಂಜೆ' ಎಂಬ ಅಪವಾದವು ಇನ್ನೊಂದು ಕಾರಣ. ಅನೈತಿಕ ಸಂಬಂಧದ ಮೂಲಕ ತನ್ನ ಆಶೆ ಆಕಾಂಕ್ಷೆಗಳನ್ನು ಈಡೇಸಿಕೊಳ್ಳುವುದರ ಜೊತೆಗೆ ಊಳಿಗಮಾನ್ಯ ವ್ಯವಸ್ಥೆಯನ್ನು ಹಾಗೂ ಅದರ ಪ್ರಭುತ್ವವನ್ನು ಒಡೆಯುವ ಪ್ರಯತ್ನ ಮಾಡುತ್ತಾಳೆ. ಇದು

ಲಿಂಗರಾಜಕಾರಣದಲ್ಲಿ ಹೆಣ್ಣು ನಡೆಸುವ ಲೈಂಗಿಕ ರಾಜಕಾರಣದ ಸಂಕೇತವಾಗಿದೆ. ಮುಂದೆ ಸುಬ್ಬಮ್ಮನಿಗೆ ತನ್ನ ತಪ್ಪಿನ ಅರಿವಾಗಿ ಎಚ್ಚೆತ್ತುಕೊಂಡು ಎಲ್ಲವನ್ನೂ ಸರಿಪಡಿಸಿಕೊಳ್ಳುವ ಹಂತದಲ್ಲಿ ಹತಳಾಗುತ್ತಾಳೆ. ಆಗಲೇ ಎಡವಿದ್ದ ಸುಬ್ಬಮ್ಮ ಮತ್ತೆ ಚೇತರಿಸಿಕೊಳ್ಳಲಾರದಂತ ದುರಂತಕ್ಕೆ ಒಳಗಾಗಬೇಕಾಗುತ್ತದೆ.

ಸುಬ್ಬಮ್ಮ ಧೈರ್ಯವಾಗಿ ಎಲ್ಲವನ್ನು ಎದುರಿಸುತ್ತಾ, ಹೊರಲೋಕಕ್ಕೆ ಗೊತ್ತಾಗುವ ಹಾಗೆ ಹೋರಾಟ ನಡೆಸಿದರೆ ಇದೇ ಕಾದಂಬರಿಯಲ್ಲಿ ಬರುವ ಸೀತೆ ಮೌನ ಪ್ರತಿಭಟನೆಯನ್ನು ಮಾಡುತ್ತಾಳೆ. ತಾನು ಒಲಿದ ಗಂಡನ್ನು ಸೇರಲು ಇವಳು ಅನುಭವಿಸುವ ಮಾನಸಿಕ ನೋವು ಹಾಗೂ ದೈಹಿಕ ಸಂಕಟಗಳು ಅವಳನ್ನು ಹಾಗೂ ಅವಳ ಗುರಿಯನ್ನು ವಿಚಲಿತಗೊಳಿಸುವುದಿಲ್ಲ. ಮುತ್ತಳ್ಳಿಯ ಶ್ಯಾಮೇಗೌಡ ಹಾಗೂ ಗೌರಮ್ಮನ ಮಗಳಾದ ಸೀತೆ ಚಿಕ್ಕ ವಯಸ್ಸಿನಿಂದಲೇ ಹೂವಯ್ಯನನ್ನೂ ತನ್ನ ಆರಾಧ್ಯ ದೈವವೆಂದು ತಿಳಿದಿರುತ್ತಾಳೆ. ಕೃಷ್ಣಪ್ಪನ ಜೊತೆ ನಿಶ್ಚಯವಾಗಿದ್ದ ಅವಳ ಮದುವೆ ಕೃಷ್ಣಪ್ಪನ ಸಾವಿನೊಂದಿಗೆ ಕೊನೆ ಆಗುತ್ತದೆ. ಆದರೆ ರಾಮಯ್ಯನೊಂದಿಗೆ ಅವಳ ವಿರೋಧದ ನಡುವೆಯೂ ಮದುವೆ ನಡೆದು ಹೋಗುತ್ತದೆ. ಬಲವಂತವಾಗಿ ರಾಮಯ್ಯನೊಂದಿಗೆ ವಿವಾಹಬಂಧನಕ್ಕೆ ಸಿಲುಕಿದರೂ ಅವಳ ಮನಸ್ಸು ಹೂವಯ್ಯನನ್ನೇ ಧ್ಯಾನ ಮಾಡುತ್ತಿರುತ್ತದೆ. ಸೌಮ್ಯ ಭಾವದ ಸೀತೆಯ ಅಂತರಂಗ ದೊಡ್ಡ ಯುದ್ಧರಂಗವಾಗಿರುತ್ತದೆ. ಕೆಲವು ಕಾಲ ಮಾನಸಿಕವಾಗಿ ಅಸ್ವಸ್ಥಳಾದರೂ ಅವಳು ಹೇಳುತ್ತಿದ್ದುದು ಹೂವಯ್ಯನ ಹೆಸರನ್ನೆ. ಹೀಗೆ ಸ್ತ್ರೀಯಾಗಿ ತಾನು ಇಷ್ಟಪಟ್ಟು ಪ್ರೀತಿಸಿದ ಗಂಡಿಗಾಗಿ ಅವಳು ನಡೆಸುವ ಹೋರಾಟ ಮುಖ್ಯವಾಗುತ್ತದೆ. ರಾಮಯ್ಯನ ಮರಣದ ನಂತರ ಹೂವಯ್ಯನ ಜೊತೆ ಅವನ ಆಧ್ಯಾತ್ಮ ಯೋಚನೆಗಳಿಗೆ ಅನುಗುಣವಾಗಿ ಅವನ ಸಂಗಾತಿಯಾಗುತ್ತಾಳೆ. ಕೊನೆಗೆ ಸೀತೆ ಮನಸ್ಸಿನಲ್ಲಿ ಎದುರಿಸುತ್ತಿದ್ದ ಎಲ್ಲ ರೀತಿಯ ತಳಮಳ ಕೊನೆಗೊಳ್ಳುತ್ತದೆ. ಹೀಗೆ ಸೀತೆ ಎಲ್ಲರನ್ನು ಎದುರಿಸಿ ತನ್ನ ಮನೋದೈವವನ್ನು ಪಡೆಯಲು ಹೋರಾಡಿದ ರೀತಿ ಮಹತ್ವದ್ದಾಗಿದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಬರುವ ಸ್ತ್ರೀಯರು ಬಯಸಿದ ಗಂಡುಗಳನ್ನು ಪಡೆಯಲು ಯಾವ ರೀತಿಯ ಸಾಹಸಕ್ಕೂ ಸಿದ್ಧವಿರುವ ದಿಟ್ಟ ಧೈರ್ಯಗಾರ್ತಿಯರಾಗಿದ್ದಾರೆ. ಅಷ್ಟೇ ಅಲ್ಲದೆ ಪುರುಷ ಪ್ರಧಾನ ಸಮಾಜದಲ್ಲಿ ಆಗಬಹುದಾದ ಶಿಕ್ಷೆಯ ಭಯವನ್ನೂ ಲೆಕ್ಕಿಸದೆ ಮನೆಯನ್ನು ಬಿಟ್ಟು, ತಮ್ಮ ಗಂಡುಗಳ ಜೊತೆ ಸೇರುವ ಓಡಿಹೋಗುವ ಛಲವನ್ನು ಹೊಂದಿದವರಾಗಿದ್ದಾರೆ.

"ಮಲೆಗಳಲ್ಲಿ ಮದುಮಗಳು" ಕಾದಂಬರಿಯಲ್ಲಿ ಬರುವ ಚೆನ್ನಮ್ಮ ಸುಕೋಮಲಭಾವನೆಗಳನ್ನು ಒಳಗೊಂಡ ದಿಟ್ಟ ವ್ಯಕ್ತಿತ್ವವುಳ್ಳ ಸ್ತ್ರೀ. ಬದಲಾಗುತ್ತಿದ್ದ ಕಾಲಘಟ್ಟದಲ್ಲಿ ಸ್ತ್ರೀಯರು ತಮ್ಮ ಧೈರ್ಯ, ಆತ್ಮಬಲವನ್ನು ಹೆಚ್ಚಿಸಿಕೊಳ್ಳುತ್ತಿರುವ ಪ್ರತೀತವಾಗಿ ಚೆನ್ನಮ್ಮನ ಪಾತ್ರ ಚಿತ್ರಿತವಾಗಿದೆ. ಇವಳು ಮೇಲುವರ್ಗದಲ್ಲಿ ಜನಿಸಿದ್ದರೂ ಅದರ ಎಲ್ಲ ಕಟ್ಟುಪಾಡುಗಳನ್ನು ಒಪ್ಪಿ ಬೆಳೆದವಳಲ್ಲ. ತನಗೆ ಆಸಕ್ತಿ, ಇಚ್ಛೆ ಇರುವ ಕಡೆಗಳಲ್ಲಿ ಸ್ವತಂತ್ರವಾಗಿ ನಿರ್ಧಾರಗಳನ್ನು ತೆಗೆದುಕೊಳ್ಳುವಷ್ಟು ಮಾನಸಿಕವಾಗಿ ಪ್ರಬುದ್ಧೆಯಾಗಿರುವ ಹೆಣ್ಣಾಗಿ ಕಾಣಿಸಿಕೊಳ್ಳುತ್ತಾಳೆ. ಅಷ್ಟೇ ಅಲ್ಲದೆ ತನ್ನ ಸ್ಥಾನಮಾನಗಳಿಗಾಗಿ ಹೋರಾಟ ನಡೆಸುತ್ತಾಳೆ. ಮುಕುಂದಯ್ಯನನ್ನು ಪಡೆಯುವುದಕ್ಕಾಗಿ ಅವಳು ತನ್ನ ಬದುಕನ್ನೇ ಹೋರಾಟಕ್ಕೆ ಇಟ್ಟಿರುವುದು ಅವಳ

ಸ್ವಾಭಿಮಾನದ ಸಂಕೇತವಾಗಿದೆ. ಸಮಾಜದ ಕಟ್ಟಳೆಯನ್ನು ಮುರಿಯುವಲ್ಲಿ ಹಾಗೂ ತನ್ನ ಇಚ್ಛೆಗೆ ಅಡ್ಡ ಬರುವ ನಿಯಮಗಳನ್ನು ಮುರಿಯುವುದರಲ್ಲಿ, ಸಂಪ್ರದಾಯಗಳಿಂದ ಬಿಡುಗಡೆ ಹೊಂದುವುದರಲ್ಲಿ ಆಕೆ ಯಾವ ಹಿಂಜರಿಕೆಯನ್ನು ತೋರುವುದಿಲ್ಲ.

ದಲಿತ ಹೆಣ್ಣು ತಿಮ್ಮಿಯನ್ನು ಹಾರಿಸಿಕೊಂಡು ಬರುವ ಉದ್ದೇಶವನ್ನು ಹೊತ್ತು ಗುತ್ತಿ ಹೊರಡುವುದರಿಂದಲೇ ಈ ಕಾದಂಬರಿ ಆರಂಭವಾಗುತ್ತದೆ. "ಬೆಳಗಿನ ಸೂರ್ಯೋದಯವನ್ನು ಕಾಣುವ ತಿಮ್ಮಿಯ ಆನಂದ; ಪರವಶತೆಯ ಮೂಲಕ ಕೆಳಜಾತಿಯ ಹೆಣ್ಣಿಗೂ ದಾರ್ಶನಿಕತೆಯ ಸಾಧ್ಯತೆಯ ಅರಿವನ್ನು ಮೂಡಿಸುತ್ತಾಳೆಂದು" ಎಂದು ಡಾ॥ ಉದ್ದಂಡಯ್ಯನವರ ಅಭಿಪ್ರಾಯ ಪಡುತ್ತಾರೆ. ತಿಮ್ಮಿಯು ವಿವಾಹ ಪೂರ್ವ ಸಂಬಂಧ ಅನೈತಿಕವಾದದ್ದು ಎಂಬ ಪ್ರಶ್ನೆ ಆಕೆಗೆ ಬರುವುದಿಲ್ಲ. ಬದಲಾಗಿ ಊಟ, ನಿದ್ದೆಯಷ್ಟೇ ಸಹಜವಾಗಿ ತನ್ನ ದೈಹಿಕ ಬಯಕೆಗಳನ್ನು ಈಡೇರಿಸಿಕೊಳ್ಳುವಷ್ಟು ಸ್ವಾತಂತ್ರವನ್ನು ಪಡೆಯುತ್ತಾಳೆ.

ಊಳಿಗಮಾನ್ಯ ವ್ಯವಸ್ಥೆಯು ಗುತ್ತಿಗೆ ಇವಳನ್ನು ಮದುವೆ ಮಾಡಿದರೆ ಜೀತಕ್ಕೆ ಒಂದು ಹೆಣ್ಣಾಳು ಕಡಿಮೆ ಆಗುವುದೆಂದು ಅವರಿಬ್ಬರ ಮದುವೆಗೆ ವಿರೋಧ ಒಡ್ಡುತ್ತದೆ. ಆದರೆ ತಿಮ್ಮಿಯು ತಮ್ಮ ಧಣಿಗಳ ಶಿಕ್ಷೆಯ ಪೂರ್ವ ಯೋಚನೆಯನ್ನು ಮಾಡದೆ ಅವರ ವಿರೋಧವನ್ನು ಎದುರಿಸಿ ಗುತ್ತಿಯೊಡನೆ ಬರುತ್ತಾಳೆ. ಇಡೀ ಯಾಜಮಾನ್ಯ ವ್ಯವಸ್ಥೆ ಅವರ ಸಂಬಂಧವನ್ನು ತಡೆಯುವಲ್ಲಿ ವಿಫಲವಾಗುತ್ತದೆ. ತಿಮ್ಮಿಯು ಇಡೀ ವ್ಯವಸ್ಥೆಯ ವಿರೋಧವನ್ನು ಲೆಕ್ಕಿಸದೆ ಎಲ್ಲ ಕಟ್ಟುಪಾಡುಗಳನ್ನು ಮೀರಿ ತಾನು ಒಲಿದ ಗಂಡನ್ನು ಸೇರುವ ಧೈರ್ಯಗಾರ್ತಿಯಾಗಿ, ಆಧುನಿಕ ಸ್ತ್ರೀಯಾಗಿ ಕಂಡುಬರುತ್ತಾಳೆ. ಕೆಳ ಜಾತಿಯಲ್ಲಿ ಹುಟ್ಟಿದ ತಿಮ್ಮಿ ತನ್ನ ಲೈಂಗಿಕ ಬಯಕೆಯನ್ನು ಈಡೇರಿಸಿಕೊಳ್ಳುವಲ್ಲಿ ಸ್ವೇಚ್ಛೆಯಿಂದ ಮುಂದುವರಿಯುತ್ತಾಳೆ. ಅವಳ ಮನಸ್ಸಿನಲ್ಲಿ ಯಾವುದೇ ಸಂಘರ್ಷವಾಗಲೀ, ತೊಳಲಾಟವಾಗಲೀ ಇರುವುದಿಲ್ಲ. ಆದರೆ ಸುಬ್ಬಮ್ಮನು ಇವುಗಳನ್ನು ಎದುರಿಸುತ್ತಾಳೆ. ಮೇಲುವರ್ಗದ ಸ್ತ್ರೀಯಾದ ಇವಳು ಸೇರಿಗಾರನೊಂದಿಗಿನ ಅನೈತಿಕಸಂಬಂಧವನ್ನು ಮುಚ್ಚಿಡಲು ಪ್ರಯತ್ನಿಸಿ ದುರಂತಕ್ಕೆ ಗುರಿಯಾಗುತ್ತಾಳೆ. ಹೀಗೆ ಕುವೆಂಪುರವರು ಹೆಣ್ಣಿನ ಮನದಲ್ಲಿ ನಡೆಯುವ ಎರಡು ವೈರುದ್ಧ್ಯಗಳನ್ನು ಕೊಡುತ್ತಾರೆ.

ಪುರುಷ ಪ್ರಧಾನ ಸಮಾಜದಲ್ಲಿ ಅಂತಕ್ಕ ದಿಟ್ಟತದಿಂದ ಗಂಡಸಿನಂತೆ ಹೋಟಲನ್ನು ನಡೆಸುವ ಇನ್ನೊಂದು ಮಾದರಿಯಾಗಿ ಈ ಕಾದಂಬರಿಯಲ್ಲಿ ಬರುತ್ತಾಳೆ. ಅವಳ ಮಗಳಾದ ಕಾವೇರಿಗೆ ದೇವಯ್ಯನನ್ನು ಒಲಿಸಿಕೊಂಡು ಅವನ ಶ್ರೀಮಂತಿಕೆಯನ್ನು ಲಪಟಾಯಿಸುವ ಬುದ್ಧಿಯನ್ನು ಭೋದಿಸುತ್ತಾಳೆ. ಆದರೆ ಇವರಿದ್ದ ಸಮಾಜದಲ್ಲಿ ಸಿಕ್ಕ ಪ್ರೇರಣೆಗಳು ಈ ಮನೋಭಾವಕ್ಕೆ ನೀರೆರೆದವು ಎಂದರೆ ತಪ್ಪಾಗುವುದಿಲ್ಲ. ಅಂತಕ್ಕನ ಹೋಟ್ಲು ಮುಂದೆ 'ವಿದ್ಯಾರ್ಥಿ ನಿಲಯ'ವಾಗಿ ಪರಿವರ್ತನೆಯಾಗುವ ಸೂಚನೆಯನ್ನು ಕಾದಂಬರಿ ಕೊಡುತ್ತದೆ. ಅಂತಕ್ಕನ ಸಮಾಜವಿರೋಧೀ ಭಾವನೆಯೇ ಅವಳ ಮುಂದಿನ ಅವಳ ಪರಿವರ್ತಿತ ಬದುಕಿಗೂ, ಸಮಾಜದ ವಿಕಸನಕ್ಕೂ ಮಾರ್ಗವಾಗಿ ನಿಲ್ಲುತ್ತದೆ. ಒಟ್ಟಿನಲ್ಲಿ ಒಬ್ಬ ಒಂಟಿ ಹೆಣ್ಣಾಗಿ

ದಿಟ್ಟತನದಿಂದ ಸಮಾಜದಲ್ಲಿ ಬದುಕುವ ಅವಳ ಚಾಣಾಕ್ಷತನ, ಬುದ್ಧಿವಂತಿಕೆ, ಧೈರ್ಯ ಮೆಚ್ಚುವಂಥದ್ದು.

ಈ ಕಾದಂಬರಿಯಲ್ಲಿ ಸಂಪ್ರದಾಯ ಶೀಲ ಹೆಣ್ಣಿನ ಮಾದರಿಯಾಗಿ ಬೆಟ್ಟಳ್ಳಿ ದೇವಯ್ಯನ ಪತ್ನಿ ದೇವಮ್ಮನನ್ನು ನೋಡಬಹುದಾಗಿದೆ. ಇವಳು ತನ್ನ ಗಂಡ ಪರಸ್ತ್ರೀಯನ್ನು ಮೋಹಿಸುತ್ತಿರುವುದು ಗೊತ್ತಿದ್ದೂ ಮೌನದಿಂದ ಇರುತ್ತಾಳೆ. ಆದರೆ ಅವನು ಮತಾಂತರ ಹೊಂದುವುದನ್ನು ಮಾತ್ರ ಸಹಿಸುವುದಿಲ್ಲ. ಆಕೆಯ ಈ ಧೋರಣೆ ಪರಂಪರೆಯೂ ಆಕೆಯ ಮನಸ್ಸಿನಲ್ಲಿ ಭಿತ್ತಿ ಬೆಳೆದ ಧರ್ಮಪರ ಭಾವನೆಗಳ ಸಂಕೇತವಾಗಿದೆ. ಧರ್ಮದ ವಿಷಯದಲ್ಲಿ ಗಂಡನೊಂದಿಗೆ ಆಕೆ ರಾಜಿ ಮಾಡಿಕೊಳ್ಳದೆ, ಗಂಡನಿಗೆ ಎದುರಾಗಿ ನಿಲ್ಲುತ್ತಾಳೆ.

'ಸೇಸಿ' ತಿಮ್ಮಿಯ ತಾಯಿ. ಕುಟುಂಬದ ಒಳಿತಿಗಾಗಿ ಹೋರಾಡುವ ಮಾತೃ ಸ್ವರೂಪಿಣಿಯಾಗಿ ಗೋಚರಿಸುತ್ತಾಳೆ. ಜೀತದಾಳಾದರೂ ತನ್ನ ಒಡೆಯರನ್ನು ಎದುರಿಸಿ ನಿಲ್ಲುವ ಶಕ್ತಿಯಾಗಿ ಕಾಣಿಸಿಕೊಳ್ಳುತ್ತಾಳೆ. ಧಣಿಗಳ ವಿರೋಧದ ನಡುವೆಯೂ ತಿಮ್ಮಿಯನ್ನು ಗುತ್ತಿಯೊಂದಿಗೆ ಓಡಿ ಹೋಗಲು ಒತ್ತಾಸೆಯಾಗಿ ನಿಲ್ಲುತ್ತಾಳೆ. ಇದು ತಿಮ್ಮಿಯ ದಿಟ್ಟತನವನ್ನು ತೋರುತ್ತದೆ.

ತನ್ನ ಕಾರ್ಯ ಸಾಧನೆಗಾಗಿ ಎಂಥಹ ಕೀಳುಮಟ್ಟದಲ್ಲಿ ಇಳಿಯುವ ವ್ಯಕ್ತಿತ್ವವನ್ನು ಬಾವಿಕೊಪ್ಪದ 'ನಾಗತ್ತೆ' ಪಾತ್ರ ಪ್ರತಿನಿಸುತ್ತದೆ. ನಾಗತ್ತೆ ನೈತಿಕವಾಗಿ ಅತ್ಯಂತ ಕೆಳಸ್ತರದ ಹೆಣ್ಣಾಗಿ ಈ ಕಾದಂಬರಿಯಲ್ಲಿ ಕಂಡು ಬರುತ್ತಾಳೆ. ಸಾಮಾಜಿಕ ನೀತಿಗಳನ್ನು ಉಲ್ಲಂಘಿಸುವ ಕುಟಿಲ ತಂತ್ರಗಳನ್ನು ಈಕೆ ಬಲ್ಲವಳಾಗಿದ್ದಾಳೆ. ವಿಧವೆಯಾದ ತನ್ನ ಸೊಸೆ ನಾಗಕ್ಕನಿಗೆ ಅವಳ ಇಚ್ಛೆಗೆ ವಿರುದ್ಧವಾಗಿ 'ಕೂಡಿಕೆ' ಮಾಡಿಸಲು ಅಸಹ್ಯವೆನಿಸುವ ತಂತ್ರಗಳನ್ನು ಹೂಡುತ್ತಾಳೆ. ಹೂವಳ್ಳಿ ವೆಂಕಟಣ್ಣನೊಂದಿಗೆ ತನ್ನ ಕೂಡಿಕೆಯನ್ನು ಬಹಳ ತಂತ್ರದಿಂದ ಯಶಸ್ವಿ ಪಡೆದು ಅದೇ ತಂತ್ರಕ್ಕೆ ನಾಗಕ್ಕನನ್ನೂ ಬಲಿಯಾಗಿಸುತ್ತಾಳೆ. ಆದರೆ ನಾಗಕ್ಕನ ಸ್ವಭಾವ ಎಲ್ಲರನ್ನು ಗೆಲ್ಲುವಂಥದ್ದು. ಇದೇ ಪ್ರತಿಕೂಲ ಪರಿಸ್ಥಿತಿಯನ್ನು ಮೀರಿ ಭಿನ್ನವಾಗಿ ಬೆಳೆಯುತ್ತಾಳೆ. ಹೀಗೆ ಕುವೆಂಪುರವರು ಎರಡು ಭಿನ್ನ ಪಾತ್ರಗಳನ್ನು ಜೊತೆಯಲ್ಲಿಟ್ಟು ನೈತಿಕ ಮೌಲ್ಯಗಳ ಬಗ್ಗೆ ಇರುವ ಭಿನ್ನ ಮನಸ್ಥಿತಿಯನ್ನು ನಮ್ಮ ಎದುರಿಗೆ ಕಟ್ಟಿಕೊಡುತ್ತಾರೆ.

ಹೀಗೆ ಕುವೆಂಪುರವರ ಸಾಹಿತ್ಯದಲ್ಲಿ ಸ್ತ್ರೀತ್ವದ ಭಿನ್ನ ಮಾದರಿಗಳನ್ನು ಈ ಮೂಲಕ ಗುರುತಿಸಬಹುದಾಗಿದೆ. ಹೆಣ್ಣಿನ ಒಂದೊಂದು ಮಾದರಿಗಳನ್ನು ಕೊಡುವ ಮೂಲಕ, ವಿಶಿಷ್ಟವಾದ ಸ್ತ್ರೀಪರ ತಾತ್ವಿಕ ಚಿಂತನೆಗಳನ್ನು ಕಟ್ಟಿ ಕೊಡುತ್ತಾರೆ. ಸ್ತ್ರೀಯರು ವಿಭಿನ್ನ ಹೋರಾಟಗಳ ಮೂಲಕ ತಮ್ಮ ಸ್ಥಾನಮಾನಗಳನ್ನು ಪಡೆಯಲು ಇಲ್ಲಿ ಹೋರಾಡುತ್ತಾರೆ. ತಮ್ಮದೇ ಆದ ಚಹರೆಯನ್ನು ಕಟ್ಟಿಕೊಳ್ಳಲು ಪ್ರತಿಭಟನೆಯನ್ನು ನಡೆಸುತ್ತಾರೆ. ಒಟ್ಟಾರೆ 'ಸ್ತ್ರೀತ್ವದ' ಕಲ್ಪನೆಯನ್ನು ಕುವೆಂಪುರವರು ಸಂಕೀರ್ಣ ನೆಲೆಯಿಂದ ಮುಕ್ತ ಜಗತ್ತಿನ ನೆಲೆಗೆ ತಂದಿರಿಸುವ ಪ್ರಯತ್ನಮಾಡಿದ್ದಾರೆ. ಒಟ್ಟಿನಲ್ಲಿ ಹೆಣ್ಣು ಗಂಡುಗಳ ನಡುವಿನ ಕಾಮ – ಪ್ರೇಮ ಮತ್ತು ಪಾರಂಪರಿಕ

ಮೌಲ್ಯಗಳ ಸಂಕೀರ್ಣವನ್ನೂ, ಬಿಕ್ಕಟ್ಟುಗಳನ್ನೂ ಅಭೂತಪೂರ್ವವಾಗಿ ತಮ್ಮ ಕಾದಂಬರಿಗಳಲ್ಲಿ ಅನಾವರಣಮಾಡಿದ್ದಾರೆ.

ಗಂಡು - ಹೆಣ್ಣಿನ ಲೈಂಗಿಕ ಸಂಬಂಧಗಳು ಕುರಿತಂತೆ, ಪ್ರೀತಿ-ಪ್ರೇಮ, ಪ್ರಣಯ-ವಿರಹಕ್ಕೆ ಸಂಬಂಧಿಸಿದಂತೆ ಮಡಿವಂತಿಕೆಯನ್ನು ಮೀರಿ ಮುಕ್ತವಾದ ಅಭಿವ್ಯಕ್ತಿ ಕುವೆಂಪು ಕಾದಂಬರಿಗಳ ವೈಶಿಷ್ಟ್ಯವಾಗಿದೆ. ಪುರುಷ ಪ್ರಧಾನ ವ್ಯವಸ್ಥೆಯ, ಅದರಲ್ಲೂ ಊಳಿಗಮಾನ್ಯ ವ್ಯವಸ್ಥೆಯ ನಿಲುವನ್ನು ಪ್ರಶ್ನಿಸುವ ಇವರ ಕಥಾ ಸಾಹಿತ್ಯ ಸ್ತ್ರೀವಾದದ ಆಶಯದಿಂದ ಕೂಡಿದೆ. ಇವರ ಒಟ್ಟು ಸಾಹಿತ್ಯದಲ್ಲಿ ಸ್ತ್ರೀ ಕುರಿತಾದ ಪ್ರತಿಸಂಸ್ಕೃತಿಯ ಸಂವೇದನೆಗಳನ್ನು ಕಾಣಬಹುದಾಗಿದೆ.

## ಅಡಿ ಟಿಪ್ಪಣಿ

1. ಸಾಹಿತ್ಯ ವಿಮರ್ಶೆ, 1998, ಸಂ. ಡಾ॥ ಜಿ.ಎಂ.ಹೆಗಡೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು 1999, ಪು. 162
2. ಕುವೆಂಪು ಸಂಸ್ಕೃತಿ ಚಿಂತನೆ, ಸಂ. ಡಾ॥ ಕೆ.ಸುಮಿತ್ರಾಬಾಯಿ, ಬೆಂಗಳೂರು, 2006, ಪು. 127
3. ಅದೇ, ಪು. 130-131
4. ಸಮಗ್ರ ಪದ್ಯ ಸಂಪುಟ, (ಕುವೆಂಪು)ಕನ್ನಡ ವಿಶ್ವವಿದ್ಯಾಲ0ಯ, ಹಂಪಿ
5. ಕಬ್ಬಿಗನ ಕೈ ಬುಟ್ಟಿ,ಕುವೆಂಪು, ಉದಯರವಿ ಪ್ರಕಾಶನ, ಮೈಸೂರು, ಪು. 114
6. ಕುವೆಂಪು ಸಂಸ್ಕೃತಿ ಚಿಂತನೆ, ಸಂ.ಡಾ॥.ಕೆ.ಸುಮಿತ್ರಾಬಾಯಿ, 0ಯುವರಾಜ ಕಾಲೇಜು, ಮೈಸೂರು ಪು. 130
7. ಅದೇ, ಪು. 134
8. ಕುವೆಂಪು ಕಥನ, ಡಾ॥ ಉದ್ದಂಡಯ್ಯ, ಅಧ್ಯಯನ ಮಂಡಲ, ಬೆಂಗಳೂರು 2004, ಪು. 165

# ಶ್ರೀ ರಾಮಾಯಣ ದರ್ಶನಂ ಮಹಾ ಕಾವ್ಯದಲ್ಲಿ ಹೆಣ್ಣಿನ ವಿಕಾಸ

| | | | |
|---|---|---|---|
| ಅ. | ಮಂಥರೆ | : | ಅಸ್ತಿತ್ವದ ಹುಡುಕಾಟ |
| ಆ. | ಸೀತೆ | : | ಸ್ತ್ರೀಶಕ್ತಿ ಕಟ್ಟುವ ಪ್ರತೀಕ |
| ಇ. | ಊರ್ಮಿಳೆ | : | ಅನಂತ ನಿರೀಕ್ಷೆ ಮತ್ತು ಕರ್ತವ್ಯ ಪ್ರಜ್ಞೆ |
| ಈ. | ಮಂಡೋದರಿ | : | ಪರಿವರ್ತನೆಯ ರೂವಾರಿ |
| ಉ. | ಅಹಲ್ಯೆ | : | ತಪೋನೆಲೆಯ ವಿಕಾಸ |
| ಊ. | ಶಬರಿ | : | ಸೇವೆಯ ಅತ್ಯುನ್ನತ ನೆಲೆ |

## ಅಧ್ಯಾಯ – 3

## ರಾಮಾಯಣ ದರ್ಶನಂ ಮಹಾಕಾವ್ಯದಲ್ಲಿ ಹೆಣ್ಣಿನ ವಿಕಾಸ

### ಅ. ಮಂಥರೆ : ಅಸ್ತಿತ್ವದ ಹುಡುಕಾಟ

ಮಂಥರೆಯ ಪಾತ್ರವನ್ನು ನಮ್ಮ ಪರಂಪರೆಯು ಬಹು ದುಷ್ಟ ಹಾಗೂ ನೀಚವೆಂಬಂತೆ ಚಿತ್ರಿಸುತ್ತಾ ಬಂದಿದೆ. ರಾಮನನ್ನು ಕಾಡಿಗೆ ಅಟ್ಟಿ, ದಶರಥನ ಸಾವಿಗೆ ಕಾರಣಳಾಗಿ, ಅಯೋಧ್ಯೆಯ ನೆಮ್ಮದಿಯನ್ನು ಹಾಳು ಮಾಡಿದ ಮಹಾಪಾಪಿ ಎಂಬಂತೆ ದೂಷಿಸುತ್ತ ಬಂದಿರುವುದನ್ನು ಗುರುತಿಸಬಹುದಾಗಿದೆ.

ವಾಲ್ಮೀಕಿ ರಾಮಾಯಣದಲ್ಲಿ ಮಂಥರೆಯ ಪಾತ್ರ ಅನಿರೀಕ್ಷಿತವಾಗಿ ಬರುತ್ತದೆ. ಅಲ್ಲಿ ಕೈಕೆಯ ದಾಸಿಯಾಗಿ ಅರಮನೆಗೆ ಪ್ರವೇಶಿಸುತ್ತಾಳೆ. ಅವಳ ಜೊತೆಯಲ್ಲೇ ಇರುತ್ತಾಳೆ. ಮಂಥರೆಯ ಬಾಲ್ಯ, ಅವಳ ತಂದೆ, ತಾಯಿ ಯಾರು? ಇವುಗಳ ಬಗ್ಗೆ ಯಾವ ವಿಚಾರವನ್ನು ವಾಲ್ಮೀಕಿ ಕೊಡುವುದಿಲ್ಲ. ವಾಲ್ಮೀಕಿ ರಾಮಾಯಣದಲ್ಲಿ ಅವಳ ವ್ಯಕ್ತಿತ್ವವನ್ನು ಅನಾಥೆ ಹಾಗೂ ಅಜ್ಞಾತೆ ಎಂಬಂತೆ ಚಿತ್ರಿಸಲಾಗಿದೆ. ಕೈಕೆಯ ವಿನಃ ಬೇರೆ ಅಸ್ತಿತ್ವವೇ ಅವಳಿಗೆ ಅಲ್ಲಿ ಇಲ್ಲ. ರಾಮನ ಪಟ್ಟಾಭಿಷೇಕವನ್ನು ನಿಲ್ಲಿಸಿ ವನವಾಸಕ್ಕೆ ಕಳುಹಿಸಿದ ಸಂದರ್ಭದಿಂದ ಅವಳು ತನ್ನನ್ನು ತಾನು ಗುರುತಿಸಿಕೊಳ್ಳುತ್ತಾಳೆ. ಕೈಕೆಯ ಮನಃಪರಿವರ್ತನೆಯನ್ನು ಮಾಡಿ ರಾಜ್ಯ, ಮನೆ ಇವುಗಳು ಒಡೆಯುವ ಹಾಗೆ ಮಾಡುವ ಮಂಥರೆಗೆ ಕೌಸಲ್ಯೆಯ ಬಗ್ಗೆ ಸ್ವಲ್ಪವಾದರೂ ದ್ವೇಷ ಇರುವುದನ್ನು ಸೂಚ್ಯವಾಗಿ ಕೊಡುತ್ತಾರೆ. ಮುಂದಿನ ಅರಮನೆಯ ದುಃಖಕ್ಕೆಲ್ಲಾ ಇದೇ ಪೀಠಿಕೆಯಾಗುತ್ತದೆ. ಮಂಥರೆಯ ದರ್ಶನವು ನಮಗಾಗುವುದು ಮತ್ತೆ ದಶರಥನ ಸಾವಿನ ಎಲ್ಲ ಕಾರ್ಯಗಳೂ ಮುಗಿದಾಗ. ಭರತನಿಗಾಗುವ ಪಟ್ಟದ ಸಂತೋಷಕ್ಕಾಗಿ ಸರ್ವಾಲಂಕಾರ ಭೂಷಿತೆಯಾಗಿ ಬಂದ ಮಂಥರೆ, ಶತ್ರುಘ್ನನ ಹೊಡೆತಗಳಿಗೆ ಗುರಿಯಾಗುತ್ತಾಳೆ. ಶತ್ರುಘ್ನನ ಈ ಕೃತ್ಯದಿಂದ ರಾಮ ಮುನಿದುಕೊಳ್ಳಬಹುದೆಂದು ಭರತ ಹೇಳಿದಾಗ ಅವಳನ್ನು ಬಿಟ್ಟು ಬಿಡುತ್ತಾನೆ. ನಂತರ ಕೈಕೆಯ ಅಡಿಗೆರಗಿ ಬಿಟ್ಟು ಅಳುತ್ತಾಳೆ. ಮುಂದೆ ಮಂಥರೆ ಏನಾದಳು ಎಂಬುದನ್ನು ವಾಲ್ಮೀಕಿಯು ದಾಖಲಿಸುವುದಿಲ್ಲ. ಯಾವುದೋ ಮಹಾನ್ ಉದ್ದೇಶಕ್ಕೆ ಬಂದು ಮರೆಯಾದಳೆಂಬಂತೆ ಚಿತ್ರಿತಳಾಗಿದ್ದಾಳೆ. ತುಳಸೀದಾಸರ 'ರಾಮಚರಿತ ಮಾನಸ' ಹಾಗೂ 'ಕಂಬರಾಮಾಯಣ' ದಲ್ಲೂ ಮಂಥರೆಗೆ ಯಾವುದೇ ಅಸ್ತಿತ್ವ ಇಲ್ಲವೆಂಬಂತೆ ರಚಿತವಾಗಿದೆ.

ಅಸ್ತಿತ್ವದ ದೃಷ್ಟಿಯಿಂದ ಮಂಥರೆಗೆ ಕುವೆಂಪುರವರು ತಮ್ಮ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ ಕಟ್ಟಿ ಕೊಡುವ ಸ್ಥಾನ ಬಹುಮುಖ್ಯವಾದದ್ದು. ಮಂಥರೆಯಂತಹ ವಾತ್ಸಲ್ಯದೇವತೆಯಲ್ಲಿ ವಿಷ ಉದಿಸಿದ್ದಾದರೂ ಅವಳ ಮನಃ ಪರಿವರ್ತನೆಗೊಳಿಸಿ ದಯಾಲಕ್ಷ್ಮಿ ಮಂಥರಾ ದೇವಿಯನ್ನಾಗಿ ಚಿತ್ರಿಸಿದ್ದಾರೆ. ಶ್ರೀರಾಮಚಂದ್ರನ ಪಟ್ಟಾಭಿಷೇಕ ಸಂದರ್ಭದಲ್ಲಿ ಅಯೋಧ್ಯಾ ರಾಜಪ್ರಭುತ್ವದಲ್ಲಿ ಹಾಗೂ ದಶರಥನ ಕುಟುಂಬದಲ್ಲಿ ಧೂಮಕೇತುವಿನಂತೆ ಪ್ರವೇಶಿಸಿ ಎಲ್ಲವನ್ನು ಧ್ವಂಸಗೊಳಿಸುತ್ತಾಳೆ ನಿಜ. ಆದರೆ ಇದರಿಂದ ಆಕೆಯಲ್ಲಿ ಉಂಟಾದ ನೋವಿನ ಬಗ್ಗೆ ಯಾರೂ ಮರುಕಪಡುವುದಿಲ್ಲ. ಎಲ್ಲರಿಂದಲೂ ತಿರಸ್ಕಾರಕ್ಕೊಳಗಾದ ಮಂಥರೆಗೆ ಅವರೆಲ್ಲರ ಮೇಲೆ ಪ್ರೀತಿ ಮೂಡದಿರುವುದು ಸಹಜವೇ. ಆ ದುರ್ಬಲ ಮನಸ್ಥಿತಿಯ ನೋವು, ಸಂಕಟ

ತೊಳಲಾಟಗಳನ್ನು ಕುವೆಂಪುರವರು ಸ್ಪಷ್ಟವಾಗಿ ಚಿತ್ರಿಸುತ್ತಾರೆ. ಮಂಥರೆಯ ಹುಟ್ಟನ್ನು ಹೀಗೆ ಪರಿಚಯಿಸುತ್ತಾರೆ.

*"ಕಟ್ಟಲಿಹ ಕಬ್ಬಕ್ಕೆ ಮೊದಲ್ ಗುದ್ದಿಲಿ ಪೂಜೆಯೋಲ್*
*ನಡೆದು ನೋಡಕ್ಕೆ, ಕಾಣಿಸಿಕೊಂಡು ದಸ್ಯುಶಿಶು*
*ಮಳ್ ಮಣ್ ತರಗೆಲೆಯಿಡಿದ ನೆಲದ ಮೇಲಿರುವೆ*
*ಮುತ್ತಿ ಹಾ ವಿಕೃತಿ ವಕ್ರತೆ ರೂಹುಗೊಂಡಂತೆ"*

ಒಮ್ಮೆ ಕೈಕೆಯ ತಂದೆ ಕಾಡಿನಲ್ಲಿ ಬೇಟೆ ಆಡಿ ಬರುತ್ತಿರುವಾಗ ಅಡವಿಯೇ ಅಳುತ್ತಿರುವಂತೆ ಶಿಶುರೋಧನ ಕೇಳಿಸುತ್ತದೆ. ಇರುವೆ ಮುತ್ತಿ ವಕ್ರತೆಯೇ ಮೂರ್ತಿವೆತ್ತ ಶಿಶುವನ್ನು ಕಂಡು ಕರುಣೆಯಿಂದ ಅರಮನೆಗೆ ತರುತ್ತಾನೆ. ಮಗುವಿನ ಕುರೂಪವನ್ನು ಕಂಡು ಮುಖಕ್ಕೆ ಕೆಸರಿಡುವಂತೆ ಮಂಥರೆ ಎಂಬ ಹೆಸರನ್ನು ಇಡುತ್ತಾರೆ. ಎಲ್ಲರ ಅವಮಾನ, ತಿರಸ್ಕಾರ, ಅವಹೇಳನಗಳನ್ನು ಮೂಕವಾಗಿ ಸಹಿಸಿಕೊಂಡು ಈಕೆ ಬೆಳೆಯುತ್ತಾಳೆ. ಇದರಿಂದ ಸಹಜವಾಗಿಯೇ ಅವಳಲ್ಲಿ ಜೀವನವಿರೋಧಿ, ಮಾನವ ವಿರೋಧಿ ಭಾವನೆಗಳು ಬೆಳೆಯುತ್ತವೆ. ಮಂಥರೆಯ ಬಾಹ್ಯರೂಪವನ್ನು ಕುವೆಂಪು ಹೀಗೆ ಕೊಡುತ್ತಾರೆ :

*"ಕುಡು ಬಿಲ್ಲು ಬಾಗಿದ ಮೆಯ್ಯ,*
*ತೊನ್ನು ಬೆಳಲೆವಿಡಿದ ಕರ್ರನೆಯ ಕುಬ್ಬತೆಯ*
*ಗೂಳಿ ಹಿಣಿಲಿನವೋಲು ಗೂನುವುಬ್ಬಿದ ಬೆನ್ನು*
*ಸುಕ್ಕು ನಿರಿನಿರಿಯಾದ ಬತ್ತಿದ ತೊವಲ್ ಪತ್ತಿ*
*ಬಿಗಿದೆಲ್ವುಗೂಡಿನಾ ಶಿಥಿಲ ಕಂಕಾಲತೆಯ,*
*ಪಲ್ಲುದುರಿ ಬೋಡಾದ ಬಚ್ಚು ಬಾಯಿಯ, ಕುಳಿಯ*
*ಕೆನ್ನೆಗಳ, ದಿಟ್ಟಿ ಮಾಸಿದ ಕಣ್ಣ ಕೋಟರದ*
*ಕರ್ಬುನ ಮೊರಡು ಮೊಗದ, ಕೂದಲುದುರಿದ ಬೋಳು*
*ಪುರ್ಬಿನ ವಿಕಾರದಾ, ಬೆಳ್ಪಕ್ಕಿ ತಿಪ್ಪುಳನೆ*
*ಮಂಡೆಯಂ ಮುತ್ತಿ ಕೆದರಿದ ಬೆಳ್ಪನೆಯ ನವಿರ*
*ಅಸ್ಥಿಪಂಜರದಂತೆ"*

ಇವಳನ್ನು ನೋಡಿದವರೆಲ್ಲ ಅಮಂಗಳವೆಂದು ದೂರ ಸರಿಯುತ್ತಿದ್ದರು. ಆಕೆಗೆ ಜೀವವಿದೆ ಎಂದಾದರೂ ಆಕೆಯನ್ನು ಆದರಿಸಲಿಲ್ಲ. ಹೀಗ್ ಎಲ್ಲರಿಂದ ತಿರಸ್ಕೃತಳಾದಳು.

ಮಂಥರೆಯು ಹೀಗೆ ಬೆಳೆಯುತ್ತಿರುವಾಗ ಕೈಕೆಯ ಹುಟ್ಟು ಅವಳಿಗೆ ಮರುಜನ್ಮವನ್ನು ನೀಡಿದಂತಾಗುತ್ತದೆ. ಅವಳ ಪಾಲನೆಯಲ್ಲಿ ತನ್ನ ಎಲ್ಲ ಅಪಮಾನಗಳನ್ನು ಮರೆಯುತ್ತಾಳೆ. ಕೈಕೆಯ ಬಾಳಿನ ಎಲ್ಲವೆಂಬಂತೆ ಬದುಕುತ್ತಾಳೆ. ಕೈಕೆಯ ದಶರಥನೊಡನೆ ಮದುವೆ ಆದಾಗ ಅವಳೊಡನೆ ಕೋಸಲಕ್ಕೆ ಬರುತ್ತಾಳೆ. ಇಲ್ಲೂ ಸಹ ಜನರಿಂದ ತಿರಸ್ಕೃತಳಾಗುತ್ತಾಳೆ. ಆದರೆ ಕೈಕೆಗಾಗಿ ಎಲ್ಲವನ್ನು ಸಹಿಸಿಕೊಳ್ಳುತ್ತಾಳೆ. ಕೈಕೆಗೆ ಭರತನು ಹುಟ್ಟಿದಾಗ ಅವಳಿಗೆ ಸ್ವರ್ಗವೇ ಸಿಕ್ಕಷ್ಟು ಸಂತೋಷವಾಗುತ್ತದೆ. ಮಂಥರೆಯು ಹೆತ್ತ ತಾಯಿಯೇ ನಾಚುವಂತೆ ಭರತನನ್ನು ಪಾಲನೆ ಮಾಡುತ್ತಾಳೆ. ಮಂಥರೆಯ ಲೋಕ ಹೀಗಿದೆ :

*"ನರರನ್ಯರಿಲ್ಲಾಯ್ತು ಮಂಥರೆಯ*
*ಲೋಕಕ್ಕೆ, ಕೈಕೆ ಭರತರ್‌ವಿನಾ, ದಶರಥಂ*

*ಕೈಕೆ ಭರತರಿಗಾಗಿ; ಕೈಕೆ ಭರತರಿಗಾಗಿ*
*ಕೋಸಲ ಮಯೋಧ್ಯೆಗಳ್, ಶಶಿ ಸೂರ್ಯತಾರಾಳಿಗಳ್*
*ಕೈಕೆ ಭರತರಿಗಾಗಿ ; ಭರತನಾಳ್ವಕೆಗಾಗಿ ಈ ಪೃಥವಿ*"[3]

ಹೀಗೆ ಮಂಥರೆಗೆ ಇವರಿಬ್ಬರಿಲ್ಲದೆ ಲೋಕವಿಲ್ಲವೆಂಬಂತೆ ತನ್ನ ಸೀಮಿತ ಜಗತ್ತಿನಲ್ಲಿ ಅತ್ಯಾನಂದದಿಂದ ಬರುತ್ತಾಳೆ.

ಒಮ್ಮೆ ಒಂದು ಅಪೂರ್ವ ಸನ್ನಿವೇಶದಲ್ಲಿ ಬಾಲ ಭರತನೊಡನೆ ಅರಮನೆಗೆ ಬರುತ್ತಾಳೆ. ಪುಟ್ಟಕಂದನಾದ ರಾಮನ ಚಂದ್ರಬೇಕೆನ್ನುವ ವಿಶಿಷ್ಟ ಬೇಡಿಕೆಯನ್ನು ಈಡೇರಿಸಲಾರದೆ ಎಲ್ಲರೂ ಕೈ ಚೆಲ್ಲಿ ಕುಳಿತಿದ್ದಾಗ ಮಂಥರೆಯು ಚಂದ್ರನ ಪ್ರತಿಬಿಂಬವನ್ನು ಕನ್ನಡಿ ಮೂಲಕ ರಾಮನ ಕೈಯಲ್ಲಿತಂದು ರಾಮನ ಮುಖದಲ್ಲಿ ನಗು ಅರಳಿಸುತ್ತಾಳೆ. "ರಾಮಚಂದ್ರತ್ವ ಪೂರ್ಣಗೊಂಡದ್ದು ಮಂಥರೆಯಿಂದಲೆ"[4] ಎಂದು ಕುವೆಂಪುರವರು ಹೇಳುತ್ತಾರೆ. "ಕನ್ನಡಿ ಹಿಡಿಯುವ ಮೂಲಕ ಆಕೆ ಶಿಶು ರಾಮನಿಗೆ ತೋರಿಸಿದ್ದು ಚಂದ್ರನನ್ನು ಮಾತ್ರವಲ್ಲ. ಅವನ ಅಂತಃಸ್ವರೂಪವನ್ನು ಸಹ ಲೌಕಿಕವಾಗಿ ತಾಯಿ ತಂದೆಯರ ಕೈಯಲ್ಲಾಡುವ ಮಗು ಅಲೌಕಿಕ ಮಹಾಚೇತನವಾಗಿ ಬೆಳೆಯಲು ಬೆಳಗಲು ಮಂಥರೆ ಮಾರ್ಗ ತೋರುತ್ತಾಳೆ"[5]. ರಾಮನ ಮುಗ್ಧನಗೆಗೆ ಬೆರಗಾದ ಮಂಥರೆ ರಾಮನನ್ನೆತ್ತಿಕೊಳ್ಳಲು ಕೈಚಾಚಿದಾಗ ಅವಳನ್ನಪ್ಪಿದ್ದು ಅವಮಾನವೇ ಹೊರತು ಸೌಜನ್ಯಪೂರ್ಣ ಮರ್ಯಾದೆಯಲ್ಲ. ಇವೆಲ್ಲ ಹಂತ ಹಂತವಾಗಿ ಅವಳ ಮನಸ್ಸಿನಲ್ಲಿ ಆಳವಾಗಿ ಉಳಿಯುತ್ತಾ ಬಂದವು. ಕಡೆಗೆ ರಾಜಪ್ರಭುತ್ವ ಹಾಗೂ ಅರಮನೆಯಲ್ಲಿ ಅವರು ತೋರಿದ ಅಸಡ್ಡೆ, ಜಿಗುಪ್ಸೆ, ಮೊದಲಾದ ಮಾನಸಿಕ ಕ್ರೌರ್ಯಗಳಿಗೆ ತೋರುವ ವಿದ್ರೋಹದ ನಿಲುವುಗಳನ್ನು ಮಂಥರೆಯ ಪಾತ್ರದಲ್ಲಿ ಕಾಣಬಹುದಾಗಿದೆ.

ಕೈಕೆ ಭರತರ ವಿನಃ ಬೇರಾರೂ ಇಲ್ಲದ ಮಂಥರೆಯ ಲೋಕಕ್ಕೆ ರಾಮನ ಪಟ್ಟಾಭಿಷೇಕದ ವಿಷಯ ಬರ ಸಿಡಿಲಿನಂತೆ ಬಂದೆರಗುತ್ತದೆ. ನೀರಿನಿಂದ ಹೊರತೆಗೆದ ಮೀನಿನಂತಾಗುತ್ತದೆ. ಭರತನಿಲ್ಲದೆ ಬೇರೆ ಯಾರೂ ರಾಜ್ಯದ ರಾಜನಾಗುವುದನ್ನು ಕಲ್ಪಿಸಿಕೊಳ್ಳುವುದಕ್ಕೂ ಸಾಧ್ಯವಿಲ್ಲ. ಈ ಸಂದರ್ಭದಲ್ಲಿ ಅವಳಿಗೆ ಬೀಳುವ ಕನಸು ಇಲ್ಲಿ ಮಹತ್ವ ಪಡೆಯುತ್ತದೆ. ಯಾವ ವಿಷಯದಲ್ಲಿ ಮನುಷ್ಯನಿಗೆ ಹೆಚ್ಚು ಭಯವಿರುತ್ತದೆಯೋ ನಿಜಜೀವನದಲ್ಲಿ ಆ ಘಟನೆ ಘಟಿಸಕೂಡದೆಂದು ಮನಸ್ಸು ಹಂಬಲಿಸುತ್ತದೋ ಅವು ಅಪ್ರಜ್ಞೆಯ ಅವಸ್ಥೆಯಲ್ಲಿ ಘಟಿಸುವತ್ತ ತುಡಿಯುತ್ತವೆ. ಇದರಿಂದ ಮನುಷ್ಯನ ಮನಸ್ಸಿನ ಆತಂಕ ಇಮ್ಮಡಿಗೊಳ್ಳುತ್ತದೆ. ಮನಶಾಸ್ತ್ರದ ಪ್ರಕಾರ ಇವು ಹೀಗೆ ನಡೆದರೇ ಭಯವಿರೇಚನೆ ಆಗುವುದೆಂದು ಹೇಳುತ್ತದೆ. ಮಂಥರೆಗೆ ಬಿದ್ದ ಕನಸೂ ಈ ರೀತಿಯದು:

"*ಮುದುಕಿಯಾದ ಕೈಕೆ ಭರತನು ಕೈ ಪಿಡಿದು*
*ಮರೆಧರೆಯ ನೆಲೆಯುತಿರ್ದಳ್ ವಿಧವೆಯೋಲ್, ಕುಬ್ಜೆ*
*ಕರೆದೊಡಂ ಕಿವಿಗೊಡದೆ, ಮಗನೊಡನೆ ಕಿರಿರಾಣಿ*
*ಮುಂದು ಮುಂದೈದುತಿರೆ, ಬೈಗುಗತ್ತಲೆಯಿಳಿದು*
*ನುಂಗಿದತ್ತಿರ್ವ೦, ತೊಳತೊಳಲಿ ನೀರಡಿಸಿ*
*ದೆಸೆದೆಸೆಗೆ ಬಾಯ್ಬಿಟ್ಟು ನಿಡುವೊರಲಿಗೂಗಿ ತಾಂ*
*ಕೆದೆದಳಾ ಮರಳುಗಾವಲಿಯಿಳೆಗೆ, ರಾಮನಂ*

*ಕರೆಕರೆದು ನಿಡುಸರದೊಳಾಕ್ರಂದಿಸುತೆ ಕೂಗಿ"* [6]

ಮಂಥರೆಯ ಮನಸ್ಸು ಸದಾ ಭರತ ಹಾಗೂ ಕೈಕೆಯ ಹಿತವನ್ನೇ ಬಯಸುತ್ತದೆ. ಕನಸಿನಲ್ಲೂ ಅವರಿಗೆ ಕೇಡು ಆಗಬಾರದೆಂಬಂತೆ ಅವರನ್ನು ಪ್ರೀತಿಸುತ್ತಾಳೆ. ಹೀಗಿರುವಾಗ ಕೈಕೆ ವಿಧವೆಯಾಗಿ ಅಲೆಯುವ ದೃಶ್ಯ ಅವಳ ಹೃದಯವನ್ನು ಭಗ್ನಗೊಳಿಸುತ್ತದೆ. ಎಚ್ಚರಗೊಂಡ ಮಂಥರೆಗೆ ಕೇಳಿಸಿದ್ದು ಕನಸನ್ನು ಸಾಕಾರಗೊಳಿಸುವಂಥ ರಾಮನ ಪಟ್ಟಾಭಿಷೇಕದ ಸುದ್ದಿ. ಇದರಿಂದ ಇಡೀ ರಾಜಪ್ರಭುತ್ವ ಹಾಗೂ ಕೌಟುಂಬಿಕ ವ್ಯವಸ್ಥೆಯನ್ನು ಛಿದ್ರಗೊಳಿಸವುದಕ್ಕೆ ಕಾರಣವಾಗುತ್ತಾಳೆ. ಕೈಕೆಯ ಸೌಂದರ್ಯಕ್ಕೆ ಮರುಳಾಗಿ ಆಕೆಯ ಮದುವೆಯ ಸಂದರ್ಭದಲ್ಲಿ ಕೊಟ್ಟಿದ್ದ ದಶರಥನ ಆಶ್ವಾಸನೆಯನ್ನೇ ಅಸ್ತ್ರವನ್ನಾಗಿ ಬಳಸಿಕೊಳ್ಳುವಂತೆ ಹುನ್ನಾರ ಹೂಡಿ ಪ್ರಭುತ್ವ ಹಾಗೂ ಕೌಟುಂಬಿಕ ವ್ಯವಸ್ಥೆಯನ್ನು ಪಲ್ಲಟಗೊಳಿಸಿ ಬಿಡುತ್ತಾಳೆ. ಸ್ತ್ರೀವಾದ ಹಾಗೂ ಲಿಂಗರಾಜಕಾರಣದ ಹಿನ್ನೆಲೆಯಲ್ಲಿ ಇದೊಂದು ಮಹತ್ವದ ವಿಷಯವಾಗಿದೆ. ಏಕೆಂದರೆ ಹೆಣ್ಣೊಬ್ಬಳಿಂದ ನಡೆದ ಈ ಘಟನೆಯಿಂದ ಹಲವರು ಹಲವು ರೀತಿಯಲ್ಲಿ ಕಷ್ಟಕ್ಕೀಡಾಗುತ್ತಾರೆ. ಅಯೋಧ್ಯೆಯಲ್ಲಿ ಅರಾಜಕತೆಗೂ ಕಾರಣವಾಗುತ್ತದೆ. ದಶರಥ ಚಿಂತೆಗೀಡಾಗಿ ಪುತ್ರಶೋಕದಿಂದ ಸಾವನ್ನಪ್ಪುತ್ತಾನೆ. ರಾಮ, ಲಕ್ಷ್ಮಣ, ಸೀತೆಯರು ವನವಾಸವನ್ನು ಅನುಭವಿಸುತ್ತಾರೆ. ಕೌಸಲ್ಯೆ, ಕೈಕೆ, ಸುಮಿತ್ರೆಯರಿಗೆ ವೈಧವ್ಯ ಪಟ್ಟ ಉಂಟಾಗುತ್ತದೆ. ಭರತ ಹಾಗೂ ಶತ್ರುಘ್ನರು ರಾಮನಿಲ್ಲದೆ ಕೊರಗುತ್ತಾರೆ. ಇಡೀ ರಾಜ್ಯವೇ ಶೋಕದ ಮಡುವಾಗುತ್ತದೆ. ಒಂದೊಂದು ಘಟನೆಯ ಭೀಕರತೆಯೂ ಮಂಥರೆಯ ಮನಸ್ಸನ್ನು ಕರಗಿಸಲಿಲ್ಲವೆ ಎಂಬ ಪ್ರಶ್ನೆ ಎದುರಾದರೂ ಮಂಥರೆ ಅನುಭವಿಸಿದ ನಿಂದೆಗಿಂತ ಇದು ಆಕೆಗೆ ದೊಡ್ಡದೆನಿಸುವುದಿಲ್ಲ.

ಮಂಥರೆಯು ಕೈಕೆಯ ಮನಸ್ಸನ್ನು ಪರಿವರ್ತಿಸಿ ನಡೆಯಬೇಕಾಗಿದ್ದ ಶ್ರೀರಾಮ ಪಟ್ಟಾಭಿಷೇಕದ ಮಹಾಕಾರ್ಯವನ್ನು ನಿಲ್ಲಿಸಲು ಮುಂದಾಗುತ್ತಾಳೆ. ತಾನು ಕಂಡ ಕನಸಿಗೂ ನಡೆಯುತ್ತಿದ್ದ ವಾಸ್ತವಕ್ಕೂ ಸಂಬಂಧವನ್ನು ಕಲ್ಪಿಸಿ ಕೈಕೆಯಲ್ಲಿ ಭರತನಿಗಾಗುತ್ತಿರುವ ಅನ್ಯಾಯವನ್ನು ತಪ್ಪಿಸುವಂತೆ ನಿವೇದಿಸುತ್ತಾಳೆ. ಕೈಕೆಯು ಮೊದಲು ರಾಮನಿಗೆ ಪಟ್ಟ ಎಂದಾಗ ತನ್ನ ಕೊರಳ ಹಾರವನ್ನೇ ಸಂತೋಷದಿಂದ ಕೊಡುತ್ತಾಳೆ. ಆದರೆ ಅವಳ ದೃಢ ಮನಸ್ಸನ್ನು ಹಂತಹಂತವಾಗಿ ಪರಿವರ್ತಿಸುತ್ತಾಳೆ. ನಿನ್ನ ದುಃಖವೆ ನನ್ನ ದುಃಖ. ನಿನ್ನ ಸುಖವೆ ನನ್ನ ಸುಖ ಎಂದು ಹೇಳುತ್ತಾಳೆ ಹಾಗೂ ದಶರಥ ಕೊಟ್ಟ ಭಾಷೆಯನ್ನು ನೆನಪಿಸುತ್ತಾಳೆ ಮತ್ತು ಭರತನ ಬಗೆಗಿನ ಅಪಾರಪ್ರೇಮವನ್ನು ಅವಳೆದುರು ಹೀಗೆ ಬಿಚ್ಚಿಡುತ್ತಾಳೆ:

*"ಭರತಂ ರಾಮಗೆ ತೊಳ್ತುಗೆಯ್ಯದೆ ಪಟುವಕಾದೊಡಂ*
*ಕಳುಹು; ದಯೆದೋರು, ನಾನವನೊಡನೆ ಪೋದಪೆನ್*
*ಶುಶ್ರೂಷೆಗೆಯ್ಯೆ, ಭಿಕ್ಷೆಯಿದೆನಗೆ ನಿನ್ನಿಂದೆ!"* [7]

ಮಂಥರೆಯ ಭರತನ ಮೇಲಿನ ಈ ಅಪಾರ ಪ್ರೀತಿಯೆದುರು ಕೈಕೆ ಸೋಲಬೇಕಾಗುತ್ತದೆ. ಮಂಥರೆ ಅಲ್ಲಿಯೂ ತನ್ನ ಬುದ್ಧವಂತಿಕೆಯನ್ನು ಮೆರೆಯುತ್ತಾಳೆ. ರಾಮನ ಬಗ್ಗೆ ತನಗೆ ಯಾವ ದ್ವೇಷವೂ ಇಲ್ಲವೆಂಬುದನ್ನು ಸ್ಪಷ್ಟಪಡಿಸುತ್ತಾಳೆ:

*"ತಲೆಗೆಟ್ಟ ಗೂನಿಯೆನ್ನಯ ನುಡಿಗೆ*
*ಬಿಳ್ದು ತರುವಾಯಂದೊಳ್ ದೂರದಿರ್ ಮಮತೆಯಿಂ,*
*ನಿನ್ನ ಭರತನ ಮೇಲಣಾಳ್ದರೆಯ ಮಮತೆಯಿಂ,*
*ರಾಮ ವಿದ್ವೇಷದಿಂದಲ್ತು, ರಾಮಂ ಬಾಳ್ಗೆ!"* [8]

ಎಂದು ರಾಮನ ಬಗ್ಗೆ ತನ್ನ ಹೃದಯ ವೈಶಾಲ್ಯತೆಯನ್ನು ತೋರುತ್ತಾಳೆ. ರಾಮ ರಾಜನಾದರೆ ರಾಮನ ಜೊತೆ ಕೌಸಲ್ಯೆಗೂ ರಾಜಮಾತೆಯ ಸ್ಥಾನಮಾನ ಹಾಗೂ ವಿಶೇಷ ಅಧಿಕಾರದ ಮಾನ್ಯತೆ ಸಿಗುತ್ತದೆ ಎಂಬುದರ ಅರಿವನ್ನು ಕೈಕೆಗೆ ಸ್ಪಷ್ಟವಾಗಿ ತಿಳಿಸುತ್ತಾಳೆ. ಭರತನಿಗೆ ಪಟ್ಟವಾದರೆ ಅದರಿಂದ ಕೈಕೆಗೆ ಸಿಗುವ ಸ್ಥಾನಮಾನಗಳು ಹಾಗೂ ಅಸ್ತಿತ್ವದ ಪ್ರಶ್ನೆಯನ್ನು ಅವಳಲ್ಲಿ ತುಂಬುತ್ತಾಳೆ. ಸ್ತ್ರೀಯರು ತಮ್ಮ ಅಸ್ತಿತ್ವಕ್ಕಾಗಿ ಹೋರಾಡಬೇಕು ಎನ್ನುವ ಕುವೆಂಪುರವರ ಆಶಯ ಇಲ್ಲಿ ಅಭಿವ್ಯಕ್ತಗೊಂಡಿದೆ.

'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯವು ಕುಟುಂಬದ ಒಳಗಿನ ಬಿಕ್ಕಟ್ಟು, ಸಂಘರ್ಷ ಹಾಗೂ ಪಲ್ಲಟಗಳನ್ನು ಹೇಳುತ್ತದೆ. ಸ್ತ್ರೀ ಕೇಂದ್ರಿತವಾದ, ಸ್ತ್ರೀ ಸ್ವಂತಿಕೆಯಿಂದ ಹೊಸ ಆಶಯಗಳು ತಂದೊಡ್ಡಬಹುದಾದ ಸಂಕೀರ್ಣತೆ, ಕೌಟುಂಬಿಕ ಬಿರುಕುಗಳು ಹಾಗೂ ಪ್ರಭುತ್ವದ ಬಿರುಕುಗಳನ್ನು ಈ ಕಾವ್ಯ ಮುಖ್ಯ ನೆಲೆಯಾಗಿಸಿಕೊಂಡು ವಿಶ್ಲೇಷಿಸುತ್ತದೆ. ಹೆಂಡತಿಯ ಮೋಹದ ಬಲಗೆ ಸಿಲುಕಿ, ಸ್ತ್ರೀಯನ್ನು ಪುರುಷನು ಅನುಸರಿಸುವುದರ ವ್ಯಂಗವೂ ದುರಂತವೂ ಈ ಕೃತಿಯ ಹಿನ್ನೆಲೆಯಾಗಿದೆ. ಅಂತೆಯೇ ಸ್ವತಂತ್ರ ಹಾಗೂ ಸ್ಥಾನಮಾನಗಳಿಗಾಗಿ ಹೋರಾಟ ನಡೆಸಿ ಗೆಲುವು ಸಾಧಿಸಿದ ಹೆಣ್ಣು, ಅನಂತರ ಎದುರಿಸಿದ ಸಮಸ್ಯೆಗಳು, ಬಿಕ್ಕಟ್ಟುಗಳು ಇಲ್ಲಿ ಮೈ ಪಡೆಯುತ್ತವೆ. ಸಿಂಹಾಸನದ ಅಥವಾ ಪ್ರಭುತ್ವದ ಭ್ರಮೆಯ ಬೀಜವನ್ನು ಕೈಕೆಯಲ್ಲಿ ಬಿತ್ತುವುದರ ಮೂಲಕ ದಿಕ್ಕು ತಪ್ಪಿಸುವ ಮಂಥರೆಯ ಹುನ್ನಾರ ಹಾಗೂ ಅನಂತರದ ಈ ಹೆಣ್ಣುಗಳ ದುರಂತ ಸ್ಥಿತಿ ಇವೆ, ಮೊದಲಾದ ರಾಜಕಾರಣದ ನೆಲೆಗಳನ್ನು ಈ ಕಾವ್ಯ ಪರಿಶೋಧಿಸುತ್ತದೆ.

ಕೈಕೆಯನ್ನು ಉದ್ರೇಕಕ್ಕೆ ಒಳಗು ಮಾಡಿ ದುರಂತಕ್ಕೆ ತಳ್ಳುವುದರ ಬಗ್ಗೆ ಮಂಥರೆ ಹಾಗೂ ಕೈಕೆ ಕಟು ವಿಮರ್ಶೆಗೂ ಇಲ್ಲಿ ಒಳಗಾಗಿದ್ದಾರೆ. ಮಂಥರೆಯು ಎದುರಿಸಿದ ಸಂಕಷ್ಟಗಳು, ಮನಾಪಮಾನಗಳು ಈ ಕಾವ್ಯದ ಉದ್ದಕ್ಕೂ ವಿಮರ್ಶಾತ್ಮಕ ನೆಲೆಯಲ್ಲಿ ನಿರೂಪಿತಗೊಂಡಿವೆ. ಆದರೂ ಕುವೆಂಪು ಅವರು ಮಂಥರೆಯ ಪಾತ್ರಕ್ಕೆ ಹೊಸ ಕಾಣ್ಕೆಯನ್ನು ನೀಡಿದ್ದಾರೆ.

ಪ್ರಭುತ್ವ ಹಾಗೂ ಅರಮನೆಯ ಹೆಂಗಸರ ಅಹಂಕಾರದ ನಿಲುವುಗಳು, ಸೌಂದರ್ಯ – ಕುರೂಪಗಳ ನಡುವಿನ ತಾರತಮ್ಯಗಳಂಥ ನಿಲುವುಗಳು; ಆಸೆ – ವ್ಯಾಮೋಹಗಳು; ಕುಟುಂಬ ಹಾಗೂ ಮನುಷ್ಯ ಸಂಬಂಧಗಳನ್ನು ದುರಂತಕ್ಕೆ ಒಳಗು ಮಾಡುವ ಸ್ಥಿತಿಗತಿಗಳನ್ನು ಕುವೆಂಪು ಅವರು ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಿಸಿದ್ದಾರೆ. ಅಧಿಕಾರದ ದುರಾಸೆಗಾಗಿ, ಮಗನ ಮೇಲಿನ ಮೋಹದಿಂದಾಗಿ ಹಾಗೂ ಹೆಣ್ಣಿನ ಸೇಡಿನ ರಾಜಕಾರಣಗಳಿಂದಾಗ ಸ್ತ್ರೀ ಶಕ್ತಿ ಸ್ಫೋಟಗೊಂಡು ಎಂಥ ಅಲ್ಲೋಲಕಲ್ಲೋಲಗಳನ್ನು ಉಂಟು ಮಾಡಬಹುದೆಂಬುದಕ್ಕೆ ಕೈಕೆ ಹಾಗೂ ಮಂಥರೆಯ ಪಾತ್ರಗಳು ಇಲ್ಲಿ ಉತ್ತಮ ನಿದರ್ಶನಗಳಾಗಿವೆ. ಹಾಗೆಯೇ ರಾಮನ

ಸ್ವಭಾವಸಿದ್ಧವಾದ ಆಲಸ್ಯ ಸ್ಥಿತಿಯನ್ನು ಎಚ್ಚರಗೊಳಿಸುತ್ತಾ, ಆದರ್ಶ, ದಾರ್ಶನಿಕ ಪುರುಷನನ್ನಾಗಿ ರೂಪಿಸಿದ ಕೀರ್ತಿಯು ಮಂಥರೆಗೆ ಸಲ್ಲುತ್ತದೆ. ಹೀಗೆ ಸ್ತ್ರೀ – ಪುರುಷ ಪಾತ್ರಗಳು ಇಲ್ಲಿ ಸಂಸ್ಕರಣಗೊಂಡು ಮರು ಹುಟ್ಟು ಪಡೆಯುತ್ತವೆ. ಇದೇ ಈ ಕಾವ್ಯದ ವಿಶೇಷ ಕೂಡ ಆಗಿದೆ.

ಯಾವುದೇ ಹೆಣ್ಣು ತನ್ನ ಸೌಂದರ್ಯಕ್ಕೆ ಪ್ರಮುಖ ಸ್ಥಾನವನ್ನು ಕೊಡುತ್ತಾಳೆ. ಆ ಸೌಂದರ್ಯಪ್ರಜ್ಞೆಗೆ ಆಗುವ ಅವಮಾನವನ್ನು ಎಂದಿಗೂ ಸಹಿಸಲಾರಳು. ಮಂಥರೆ ಬಾಲ್ಯದಿಂದಲೂ ತನ್ನ ಕುರೂಪತೆ ಬಗೆಗೆ ನಿಂದೆಯನ್ನು ಕೇಳುತ್ತಾ ಬಂದವಳು. ಈ ಭಾವನೆ ಕ್ರಮೇಣ ಅವಳನ್ನು ಮನುಷ್ಯರನ್ನೇ ದ್ವೇಷಿಸುವ ಹಂತಕ್ಕೆ ಕೊಂಡೊಯ್ಯುತ್ತದೆ. ಮಂಥರೆಯ ಜೀವವಿರೋಧೀ ನಿಲುವುಗಳಿಗೆ ಆಕೆಯ ತನ್ನ ಕುರೂಪತೆಯ ಬಗೆಗಿನ ನಿಂದೆಗಳು ಕಾರಣವಾಗಿದ್ದವು. ಕೈಕೆ ಮತ್ತು ಮಂಥರೆಯ ನಡುವಿನ ಸೌಂದರ್ಯ ಮತ್ತು ಕುರೂಪತೆಗಳ ನಡುವಿನ ವೈರುದ್ಯ ಮೂರ್ತಿ ಹಾಗೂ ಪ್ರಭಾವಳಿಯ ರೂಪದಲ್ಲಿದ್ದವು. ದಶರಥನ ಪಾರಂಪರಿಕ ಪ್ರಭುತ್ವದ ವಿರುದ್ಧ ರಾಜಕಾರಣ ಮಾಡಲು ಅವಳ ಈ ಎಲ್ಲ ಮನಸ್ಥಿತಿಗಳು ಪ್ರೇರಣೆ ನೀಡಿದವು. ಜೊತೆಗೆ ಕೈಕೆಯ ಲಿಂಗರಾಜಕಾರಣವೂ ಸೇರಿಕೊಂಡವು.

ಕೈಕೆಯು ತನ್ನ ಸೌಂದರ್ಯದಿಂದ ದೊರೆತ ಭಾಷೆಯ ನೆಪವನ್ನು ಉಪಯೋಗಿಸಿಕೊಳ್ಳುತ್ತಾಳೆ. ಅವಳು ನಡೆಸಿದ ರಾಜಕಾರಣ ಈ ನಿಟ್ಟಿನಲ್ಲಿ ಮುಖ್ಯವಾಗುತ್ತದೆ. ಲಿಂಗರಾಜಕಾರಣ ಎಂಬುದು ಬಹು ದೊಡ್ಡ ವಲಯ. ಅದು ಮೂರು ರೀತಿಯಲ್ಲಿ ಸಂಭವಿಸುತ್ತದೆ.

1. ಗಂಡು ಹೆಣ್ಣನ್ನು ತನಗಿಂತ ಬಲಹೀನಳೆಂದು ನಡೆಸಿಕೊಳ್ಳುವುದು.
2. ಹೆಣ್ಣು ಅಧಿಕಾರವನ್ನು ಪಡೆಯಲು ಪುರುಷ ಸಮಾಜದೊಡನೆ ಹೋರಾಡುವುದು.
3. ಹೆಣ್ಣನ್ನು ಹೆಣ್ಣೇ ಶೋಷಣೆಗೆ ಒಳಪಡಿಸುವುದು.

ಮಂಥರೆಯ ರಾಜಕಾರಣ ಎರಡನೆಯ ಮಾದರಿಯದು. ಇದರಿಂದ ಉಂಟಾಗುವ ಪರಿಣಾಮಗಳು ಇಡೀ ಸಮಾಜದ ದಿಕ್ಕನ್ನೇ ಬದಲಾಯಿಸುವಂಥದ್ದು. ಪುರುಷ ಸಮಾಜದಲ್ಲಿ ಸ್ತ್ರೀಯೊಬ್ಬಳು ಮಹತ್ವದ ಸ್ಥಾನಗಳಿಸುವುದು ಸುಲಭದ ಸಾಧನೆಯೇನೂ ಅಲ್ಲ. ಅಸ್ತಿತ್ವಕ್ಕಾಗಿ ನಡೆಸುವ ಹೋರಾಟ, ಅದರಿಂದ ಉಂಟಾಗುವ ಪರಿಣಾಮಗಳಿಗೆ ಮಂಥರೆ ಪ್ರಮುಖ ನಿದರ್ಶನವಾಗಿದ್ದಾಳೆ.

ಸ್ತ್ರೀಯರಿಗೆ ಸಾಮಾಜಿಕ, ರಾಜಕೀಯ, ಆರ್ಥಿಕ ಸಮಾನತೆ ಮೊದಲಿನಿಂದಲೂ ಇಲ್ಲವೆಂಬುದು ನಿಜವಷ್ಟೆ. ಹೆಣ್ಣಾಗಿ ಹುಟ್ಟಿದ ಮಾತ್ರದಿಂದಲೇ ಅಸಮಾನತೆಯನ್ನು ತರುವ ಸಮಾಜದಲ್ಲಿ ಮಂಥರೆಯಂತ ಕುರೂಪಿ ಹೆಣ್ಣಿನ ಸ್ಥಾನವನ್ನು ಕಲ್ಪನೆಯಲ್ಲಿಯೂ ಮೇಲಿಡಲು ಸಾಧ್ಯವಿಲ್ಲ. ಅಂತಹ ಹೆಣ್ಣು ತನ್ನ ಅಸ್ತಿತ್ವಕ್ಕಾಗಿ ಹೋರಾಡುವುದು ಮುಖ್ಯವಾಗುತ್ತದೆ. "ಶೋಷಣೆ ಮಹಿಳೆಯ ಮಾನಸಿಕ ಬೆಳವಣಿಗೆಯನ್ನು ಮೊಟಕಾಗಿಸುತ್ತದೆ. ಮಹಿಳೆಯ ಕಾರ್ಯಕ್ಷೇತ್ರ ಅವಳ ಪಾತ್ರವಲ್ಲ, ಅವಳು ಯಾರನ್ನು ಪ್ರೀತಿಸಬೇಕು ಎಂಬುದನ್ನು ಸಮಾಜವೇ ನಿರ್ಧರಿಸುತ್ತದೆ"[9] ಎಂದು ಡಾ॥ ಸುಮಿತ್ರಾಬಾಯಿರವರು ಅಭಿಪ್ರಾಯಪಡುತ್ತಾರೆ. ಹೀಗೆ ಈ ರೀತಿಯ

ಶೋಷಿತ ಮನಸ್ಥಿತಿಯಲ್ಲಿ ಮಂಥರೆಯ ಪ್ರೀತಿಗೆ ಪಾತ್ರರಾದವರು ಕೈಕೆ ಮತ್ತು ಭರತ.

ಎಲ್ಲರ ತಿರಸ್ಕಾರ, ಚುಚ್ಚು ಮಾತುಗಳು ಮಂಥರೆಯ ಮನಸ್ಸಿನ ಆಳದಲ್ಲಿ ಸುಪ್ತವಾಗಿ ಉಳಿದಿರುತ್ತವೆ. ಮರೆಯಲಾಗದ ಗಾಯ ಮಾಡುತ್ತಾ ಹೋಗುತ್ತವೆ ಹಾಗೂ ತನ್ನ ಪರಿಚರಿಯನ್ನು ಜಗತ್ತಿಗೆ ಮಾಡುವ ಅವಕಾಶಕ್ಕಾಗಿ ಕಾದು ಕುಳಿತಿರುತ್ತಾಳೆ. ಆಕೆಯ ಬಗೆಗಿನ ಒಂದೊಂದು ತಿರಸ್ಕಾರದ ನೋಟವು ಕೈಕೆ ಹಾಗೂ ಭರತನ ಮೇಲಿನ ಪ್ರೇಮದಲ್ಲಿ ಮುಚ್ಚಿಹೋಗುತ್ತವೆ. ಆದರೂ ಮನಸ್ಸಿನಲ್ಲಿದ್ದ ಈ ಎಲ್ಲ ತಿರಸ್ಕೃತ ನೋಟಗಳು ಸೇಡಿನ ರೂಪ ತಾಳುತ್ತವೆ. ಇದುವರೆಗೆ ಅಸ್ತಿತ್ವವೇ ಇಲ್ಲದಂತಿದ್ದ ಮಂಥರೆ ತನ್ನ ಚಹರೆಯನ್ನು ಹೊರ ಪ್ರಪಂಚಕ್ಕೆ ತೋರುವ ಅವಕಾಶಕ್ಕಾಗಿ ಕಾದು ಕುಳಿತಿರುತ್ತಾಳೆ. ರಾಮಚಂದ್ರನ ಪಟ್ಟಾಭಿಷೇಕದ ವಿಷಯ ತಿಳಿದಾಗ ಕೈಕೆಗೆ ಹಾಗೂ ಭರತರಿಗೆ ಅನ್ಯಾಯವಾಗುತ್ತಿದೆ ಎಂದು ಭಾವಿಸುತ್ತಾಳೆ. ಕೈಕೆ ಹುಟ್ಟಿದಾಗ ಮಂಥರೆಗೆ ಅವಳ ಅಸ್ತಿತ್ವದ ಮೊದಲ ಮೆಟ್ಟಿಲು ಕಟ್ಟಲ್ಪಡುತ್ತದೆ. ಭರತನ ಹುಟ್ಟು ಅಸ್ತಿತ್ವದ ಮೆಟ್ಟಿಲಿಗೆ ಸ್ಪಷ್ಟದಾರಿಯನ್ನು ತಂದು ಕೊಡುತ್ತದೆ. ತನ್ನ ಅಸ್ತಿತ್ವ ಸ್ಥಾಪನೆ ಗೊಳಿಸಿಕೊಳ್ಳುವ ಜೊತೆಯಲ್ಲಿಯೇ ರಾಮನ ನಗುವಿನ ಬೀಜವಾಗಿ ಬಂದ ಮಂಥರೆ ರಾಮನ ಆತ್ಮೋದ್ಧಾರಕ್ಕೂ ಮೂಲಕಾರಣಳಾಗುತ್ತಾಳೆ. ಅವನ ಪಟ್ಟವನ್ನು ನಿಲ್ಲಿಸಿ ರಾಮನ ಅಸ್ತಿತ್ವಕ್ಕೂ ಒಂದು ಮಾರ್ಗವನ್ನು ನಿರ್ಮಿಸಿಕೊಡುತ್ತಾಳೆ. ಈ ರೀತಿ ಮಂಥರೆಯ ಪಾತ್ರವನ್ನು ಬೆಳೆಸಿರುವುದು ಸ್ತ್ರೀಪರವಾದ ಕುವೆಂಪು ಅವರ ಧೋರಣೆಯ ದರ್ಶನವಾಗುತ್ತದೆ.

ಮಂಥರೆಗೆ ತನ್ನ ಬಗ್ಗೆ, ಸೌಂದರ್ಯದ ಬಗ್ಗೆ ಎಂದೂ ಕೀಳರಿಮೆ ಇಲ್ಲ. ಆದರೆ ಸಮಾಜ ಅವಳನ್ನು ತುಚ್ಛೀಕರಿಸಿದ್ದು ಹೀಗೆ :

*"ಕಂಡ ಕಂಡವರೆಲ್ಲರಂ*
*ಕುಬ್ಜೆಯನನಾಥೆಯಂ, ತಂದೆ ತಾಯಿಲ್ಲದಾ*
*ಪರದೇಶಿ ಕನ್ನೆಯಂ, ಚೀ ತೊಲಗೆಂದು*
*ಥೂ ಎಂದು ಸಾಯೆಂದು, ನಾಯ್ಮರಿಗೆ ಕಡೆಯಾಗಿ*
*ಭಾವಿಸಿದರೂ ನೃಪನ ಕಣ್ಣಾಣೆಯಂ ಮೀರ್ದು*
*ಕಡೆಗಣ್ಚಿ, ಮನುಜರೊಲ್ಮೆಯ ಸವಿಯನೊಂದಿನಿತುಮಂ*
*ಕಾಣದೆ, ಮಿಗದ ತೆರದಿ ಮಿದುಳಿಲ್ಲದೆಯೆ ಬೆಳೆದು*
*ಜಡತೆವೆತ್ತಿರ್ದ ಸೋಂಬೆಗೆ ಮಂದಿ, ಬಯ್ಯವೋಲ್*
*ಜರೆದು ಮಂಥರೆಯೆಂದು ಪೆಸರನೆಸೆದರ್, ಮೊಗಕೆ*
*ಕೆಸರನಿಡುವಂತೆ"*[10]

ಹೀಗೆ ಎಲ್ಲರಿಂದ ದೂರೀಕರಣಕ್ಕೊಳಗಾದ ಮಂಥರೆಯ ಪಾತ್ರದ ಬಗ್ಗೆ ಸಹಾನುಭೂತಿ ಹಾಗೂ ಗೌರವವನ್ನು ಕುವೆಂಪುರವರ ರಾಮಾಯಣದರ್ಶನಂ ಮಹಾಕಾವ್ಯ ತಂದು ಕೊಡುತ್ತದೆ. ಲೋಕ ಅವಳನ್ನು ನೀಚೆ, ಪಂತಕ, ದುಷ್ಟೆ ಎಂದೆಲ್ಲಾ ಕರೆದಿವೆ. ಆದರೆ ಕುವೆಂಪು ಅವಳನ್ನು ಮಮತೆಯ ಸುಳಿ 'ದಯಾಲಕ್ಷ್ಮಿ' : ಪುಣ್ಯಲಕ್ಷ್ಮಿ ಎಂದು ಕರೆದು ಹೊಸ ಅಸ್ತಿತ್ವವನ್ನು ಕಟ್ಟಿಕೊಟ್ಟಿದ್ದಾರೆ. "ಮೂಲಭೂತವಾಗಿ ಸಮಾಜದಲ್ಲಿನ ಸ್ತ್ರೀ ಶೋಷಣೆ ಹಾಗೂ ದಮನವನ್ನು ಕುರಿತ ಪ್ರಜ್ಞಾಪೂರ್ವಕ ಎಚ್ಚರ ಕುವೆಂಪು ಅವರಿಗೆ ಇತ್ತು. ಆದಕಾರಣ ಸ್ತ್ರೀಯನ್ನು ಕುರಿತಗ್ರಹಿಕೆ, ವಿವರಣೆ, ತೀವ್ರ

ವಿಶ್ಲೇಷಣೆ ಹಾಗೂ ಪುನರ್‌ಮೌಲ್ಯೀಕರಣ ಪ್ರಯತ್ನಕ್ಕೆ ಸೂಕ್ತವಾದ ತಾತ್ತ್ವಿಕತೆಯನ್ನು ಕಟ್ಟಿಕೊಡುವ ಪ್ರಕ್ರಿಯೆಈ ಕಾವ್ಯದುದ್ದಕ್ಕೂ ನಡೆಯುತ್ತದೆ."

ಮಂಥರೆಯ ಪಾತ್ರವನ್ನು ಪುನಃ ಕಟ್ಟುವಾಗ ಕುವೆಂಪುರವರು ಬಹು ಎಚ್ಚರದಿಂದ ಸ್ತ್ರೀಪರವಾದ ಧೋರಣೆಗಳ ಹಿನ್ನೆಲೆಯಿಂದ ತಂದಿದ್ದಾರೆ. ಹಾಗೂ ಆಕೆಯ ಹಿನ್ನೆಲೆಯನ್ನು ಮುಖ್ಯ ಕೇಂದ್ರವನ್ನಾಗಿಸಿಕೊಂಡಿದ್ದಾರೆ. ಇಲ್ಲಿ ಅವರ ಪ್ರಜ್ಞಾಪೂರ್ವಕ ಎಚ್ಚರ ಮಹತ್ತಾದುದು. ವಾಲ್ಮೀಕಿ ರಾಮಾಯಣದ ಮಂಥರೆ ದುಷ್ಟೆಯಾದರೆ ಇಲ್ಲಿನ ಮಂಥರೆ ನಮ್ಮ ಮನಸ್ಸಿನಲ್ಲಿ ಅನುಕಂಪೆಗೆ ಪಾತ್ರಳಾಗುತ್ತಾಳೆ. ಕೈಕೆಯ ಮನವೊಪ್ಪಿಸುವಾಗ ಭರತನ ಮತ್ತು ಕೈಕೆಯ ಮೇಲಿನ ಪ್ರೀತಿಯಿಂದ ಹೇಳುತ್ತಿದ್ದೇನೆಯೇ ಹೊರತು ರಾಮನ ಮೇಲಿನ ದ್ವೇಷದಿಂದಲ್ಲ ಎಂದು ಹೇಳಿ ಉದಾತ್ತತೆಯನ್ನು ಮೆರೆಯುತ್ತಾಳೆ.

ಮಂಥರೆ ಕೈಕೆಯ ಸಂಬಂಧ ರಕ್ತ ಸಂಬಂಧಕ್ಕಿಂತಲೂ ಮಿಗಿಲಾದುದು. ಹಾಗೆ ನೋಡಿದರೆ ಮಂಥರೆಗೆ ಪ್ರೀತಿಯ ಬಗ್ಗೆ ಪದಗಳೇ ಇಲ್ಲ. "ಹೆಣ್ಣು ಹೆಣ್ಣುಗಳ ನಡುವಣ ಸಂಬಂಧದ ಪ್ರಾಧಾನ್ಯವನ್ನು ಅದರ ಫಲವಾದ ಸ್ತ್ರೀ ಪ್ರಧಾನ ಕೇಂದ್ರಗಳನ್ನು ಶೋಧಿಸಿ ಪಡೆದ ಬಗೆಯನ್ನು ಲೆಸ್ಬಿಯನ್ ಸ್ತ್ರೀ ವಾದವು ಪ್ರತಿಪಾದಿಸುತ್ತದೆ."[12] ಎಂದು ಡಾ|| ಬಿ. ಎನ್ ಸುಮಿತ್ರಾಬಾಯಿರವರು ಗುರುತಿಸುತ್ತಾರೆ. ಕೈಕೆ ಹಾಗೂ ಮಂಥರೆಯ ನಡುವೆ ನಡೆದ ಮಾತಿನ ಫಲವಾಗಿ ಮಂಥರೆಯ ನಿರ್ಧಾರದಂತೆ ಇಡೀ ರಾಜಕೀಯ ವ್ಯವಸ್ಥೆಯೇ ಪಲ್ಲಟಗೊಂಡಿದ್ದು, ಇದು ಒಂದು ಹೊಸ ಸಾಧ್ಯತೆಯನ್ನು ತೋರುತ್ತದೆ. ಜೊತೆಗೆ ಸ್ತ್ರೀ ಮನಸ್ಸು ಮಾಡಿದರೆ ಯಾವುದೇ ಅಧಿಕಾರಗಳನ್ನು, ಸ್ಥಾನಮಾನಗಳನ್ನು ಪಲ್ಲಟಗೊಳಿಸಬಲ್ಲಳು ಎಂಬುದಕ್ಕೆ ಇದು ಒಂದು ನಿದರ್ಶನವಾಗಿದೆ.

ಅರಮನೆಗಳಲ್ಲಿ ಸ್ತ್ರೀಯರ ನಡುವೆ ನಡೆಯುವ ಪಿಸುಮಾತುಗಳು ಬಹಿರಂಗಗೊಳ್ಳುವವರೆಗೂ ಇದೊಂದು ಸ್ತ್ರೀ ರಾಜಕಾರಣದ ತಿರುವುಗಳನ್ನು ಪಡೆಯುವುದಿಲ್ಲ. ಇದು ಮಹಿಳೆಯರ ಒಗ್ಗಟ್ಟಿನ ಶಕ್ತಿಯಾಗಿ ಪ್ರೇರಣೆ ಹೊಂದಿ ಬಹಿರಂಗಗೊಂಡಾಗ ರಾಜಕೀಯ ಪಲ್ಲಟ ಉಂಟಾಗುತ್ತದೆ. ಮಂಥರೆ ನಡೆಸಿದ ರಾಜಕಾರಣವು ಈ ನಿಟ್ಟಿನಲ್ಲಿ ಮುಖ್ಯವಾಗುತ್ತದೆ. ಇಕ್ಷ್ವಾಕುವಂಶದ ಪರಂಪರೆಯನ್ನು ಮುರಿಯುತ್ತಾಳೆ. ರಾಮನಿಗೆ ಆಗಬೇಕಾಗಿದ್ದ ಪಟ್ಟವನ್ನು ತಪ್ಪಿಸಿ ಕಾಡಿಗೆ ಕಳುಹಿಸುತ್ತಾಳೆ. ನಂತರ ಉಂಟಾದ ಪರಿಣಾಮಗಳು ಭೀಕರವಾಗಿರುತ್ತವೆ. ಎಲ್ಲ ಘಟನೆಗಳಿಗೂ ಬಾಹ್ಯರೂಪದಲ್ಲಿ ಮಂಥರೆ ಕಾರಣಳಾಗಿದ್ದಾಳೆ. ಆದರೆ ಇವಕ್ಕೆಲ್ಲ 'ವಿಧಿಯ ಕೈಯ ಕಾರಣಿಕ' ವೆಂದು ಕುವೆಂಪು ಮುಂದೆ ಮಹಾಕಾವ್ಯದಲ್ಲಿ ಹೇಳುತ್ತಾರೆ. ಈ ಎಲ್ಲ ಘಟನೆಗಳು ಸಂಭವಿಸುವವರೆಗೂ ದೂರದಲ್ಲಿ ತನ್ನ ತಾತನ ಮನೆಯಲ್ಲಿದ್ದ ಭರತ ಶತ್ರುಘ್ನನೊಡನೆ ಆಗಮಿಸುತ್ತಾನೆ. ಭರತನ ಆಗಮನದ ಸುದ್ದಿಯನ್ನು ಕೇಳಿ, ಅವನನ್ನು ನೋಡಲು ಸಂತೋಷದಿಂದ ಬಂದಾಗ ಅವಳಿಗೆ ಎದುರಾದದ್ದು ಶತ್ರುಘ್ನನ ಕೋಪಾಗ್ನಿ, ಅವಳನ್ನು ಹಿಡಿದು ಕುಕ್ಕುತ್ತಾನೆ. ಜೀವವಿರುವ ಒಂದು ಪ್ರಾಣಿ ಎಂದಾದರೂ ಕನಿಕರಿಸುವುದಿಲ್ಲ. ಆಗ ಅವಳು ಕೂಗಿಕೊಳ್ಳುವುದು ಭರತನನ್ನು, ತಾಯಿಗಿಂತ ಹೆಚ್ಚಾಗಿ ಸಾಕಿ ಸಲಹಿದ ಮಂಥರೆಯ ಧ್ವನಿಯನ್ನು ಕೇಳಿ

ಅವನು ಕನಿಕರಿಸುತ್ತಾನೆ. ಅವಳು ಚೀರುವ ಧ್ವನಿ ಕೇಳಿ ಭರತನಿಗಾದ ಅನುಭವ ಹೀಗಿದೆ :

*"ಪೆತ್ತ ತಾಯ್ಗಿರ್ಮಡಿಯೊಲುಮೆವೆತ್ತು, ಕೂಸಿಂದೆ*
*ಕೌಮಾರದನ್ನೆಗಂ, ಕಟ್ಟಿ ತನ್ನಿಳ್ಳರೆಯ*
*ತೊಟ್ಟಿಲಿನದರೊಳಿಟ್ಟು ಜೋಗುಳದುಲಿಗೆ ತೂಗಿ,*
*ನಿಚ್ಚಮುಂ ಸಾಕಿ ಬೆಚ್ಚಗೆ ಸಲಹಿದಂಕೆಯ*
*ಮಂಥರೆಯ ನೀಳ್ದ ಗೋಳ್ದನಿಯ ಕೇಳ್ದುದೆ ತಡಂ*
*ಕರುಳುರಿದುದೆರ್ದೆ ಕೊರೆದು ದಯ್ ಕರುಣೆ ಭರತಂಗೆ"*[13]

ಮಂಥರೆ ತನ್ನನ್ನು ರಕ್ಷಿಸುವನೆಂದು ಅವನೆಡೆಗೆ ಹೋದಾಗ ರಾಮನ ವನವಾಸಕ್ಕೆ ಕಾರಣಳೆಂಬುದನ್ನು ಮನಕ್ಕೆ ತಂದುಕೊಂಡು 'ತೊಲಗು ಕುರೂಪಿ ನನ್ನ ಕಣ್ಣ ಮುಂದೆ ನಿಲ್ಲಬೇಡೆಂದು' ದೂಷಿಸುತ್ತಾನೆ. ತನ್ನ ಕಣ್ಣನ್ನು ತಾನೆ ಕಿತ್ತಂತೆ ಶಾಶ್ವತವಾಗಿ ನಿನ್ನಿಂದ ದೂರವಾಗುತ್ತೇನೆ, ತೊಲಗು ಎಂದು ಚೀರುತ್ತಾನೆ. ಮಂಥರೆಯ ಮೇಲಿನ ಪ್ರೇಮ ಅವಳನ್ನು ಶಿಕ್ಷಿಸಲು ಆಗದಂತೆ ಅವನನ್ನು ಕಟ್ಟಿ ಹಾಕುತ್ತದೆ.

ಯಾರಿಗಾಗಿ ಇಷ್ಟೆಲ್ಲ ರಾಜಕಾರಣ ನಡೆಸಿ, ಎಲ್ಲರಿಂದ ನಿಂದೆಗೊಳಗಾಗಿದ್ದಳೋ, ಆ ಭರತನ ತಿರಸ್ಕಾರದ ಮಾತುಗಳು ಮಂಥರೆಗೆ ಸಿಡಿಲಿನಂತೆ ಭಾಸವಾಗುತ್ತದೆ. ಭರತ ನಿಲ್ಲದ ಲೋಕವನ್ನು ಆಕೆ ಕಲ್ಪಿಸಿಕೊಳ್ಳಲೂ ಸಾಧ್ಯವಾಗುವುದಿಲ್ಲ. ಮೊದಲಿನಿಂದ ಕಾಡದಿದ್ದ ಅನಾಥಪ್ರಜ್ಞೆ ಅವಳನ್ನು ಆವರಿಸಿರುತ್ತದೆ. ಆಕೆ ದಿಕ್ಕುಗಾಣದಾಗುತ್ತಾಳೆ. ಅವಳ ಮನಸ್ಸಿನಲ್ಲಿ ಉಂಟಾದ ಯಾತನೆ, ಸಂಕಟ, ಆಘಾತದ ತೀವ್ರ ಸ್ವರೂಪವನ್ನು ಕುವೆಂಪುರವರು ಹೀಗೆ ಪರಿಚಯಿಸಿದ್ದಾರೆ :

*"ಮಂಥರೆ ಗುಂಡು ಬಡಿದಂತೆ*
*ಕೆಡೆದಳ್ವನಿಯಲಿ, ರವಿಯಾಕರ್ಷಣೆಯನುಳಯೆ*
*ನಿಚ್ಚನೇ ಮಂಗೆಟ್ಟು ಬಟ್ಟೆ ನಿಟ್ಟೆಗೆ ತಪ್ಪಿ,*
*ತತ್ತರಿಸಿ, ನೀಲಶೂನ್ಯಕ್ಕುರುರುಳುವಿಳೆಯಂತೆ*
*ಭರತನಳ್ಕರೆಯೊಂದೆ ಪರಿಯನೆಮಾಗಿರ್ದ*
*ಕುಬ್ಜೆಯಾತ್ಮಂ ತಳಂಗೆಟ್ಟುರುಳ್ದುದು; ಮತ್ತೆ*
*ಪುಡಿಪುಡಿಯಾಯ್ತು ಬೂದಿಯಾಯ್ತುಳ್ಕೆಯೋಲುರಿದುರಿದು*
*ಭರತನಾಗ್ರಹಗ್ರಹದ ಘಾತಕ್ಕೆ".*[14]

ಮಂಥರೆ ಭರತನಿಗಾಗಿ ಇಡೀ ವ್ಯವಸ್ಥೆಯನ್ನೇ ಪಲ್ಲಟಗೊಳಿಸಿದ್ದಳು. ಆದರೆ ಭರತ ಎಲ್ಲವನ್ನು ತಿರಸ್ಕರಿಸಿದಾಗ ಅವಳಿಗೆ ಮತ್ತೆ ಅಸ್ತಿತ್ವವನ್ನು ಕಟ್ಟಿಕೊಳ್ಳುವ ಪ್ರಯತ್ನ ಮಾಡುತ್ತಾಳೆ. ಇದರಿಂದ ಅವಳು ಯಾವುದನ್ನು ಮಾಡಿದರೆ ಭರತನಿಗೆ ಸಂತೋಷವಾಗುವುದೆಂದು ಯೋಚಿಸುತ್ತಾಳೆ. ಭರತನ ಹೃದಯದಲ್ಲಿ ಮತ್ತೆ ತನ್ನ ಸ್ಥಾನವನ್ನು ಸ್ಥಾಪಿಸಿಕೊಳ್ಳಲು ಬಯಸುತ್ತಾಳೆ. ಇದರಿಂದ ರಾಮನ ಬಗ್ಗೆ ಅವಳ ಮನಃಪರಿವರ್ತನೆಯಾಗುತ್ತದೆ. ರಾಮನನ್ನು ಕಾಡಿನಿಂದ ಮತ್ತೆ ನಾಡಿಗೆ ಕರೆ ತಂದರೆ ಭರತನ ಪ್ರೀತಿ ದೊರೆಯುವುದೆಂದು ಹಾತೊರೆಯುತ್ತಾಳೆ. ರಾಮನ ಆಗಮನದಿಂದ

ಮತ್ತೆ ಭರತನ ಮೊಗದಲ್ಲಿ ನಗೆ ಅರಳುವುದೆಂದು ಅರಿಯುತ್ತಾಳೆ. ಭರತನ ಅಂತರಂಗವನ್ನು ತಿಳಿದ ಮಂಥರೆ ಹುಚ್ಚಿಯಂತೆ ಕಾಡಿನಲ್ಲಿ ರಾಮನನ್ನು ಹುಡುಕುತ್ತಾ ಅವನ ಹೆಸರನ್ನು ಕರೆಯುತ್ತಾ ಅಲೆಯುತ್ತಾಳೆ. ಈಗವಳ ಮನಸ್ಸಿನಲ್ಲಿ ತುಂಬಿರುವುದು 'ರಾಮ' ಮಂತ್ರ, 'ರಾಮ ಭರತನಣ್ಣಯ್ಯನೇ' ಎಂದು ಕರೆಯುತ್ತಾ ಹಂಬಲಿಸುತ್ತಾಳೆ.

ಕುವೆಂಪುರವರು ರಾಮನಿಗಾಗಿ ಅಲೆಯುತ್ತಿದ್ದ ಮಂಥರೆಯ ಚಿತ್ರವನ್ನು ಕಣ್ಣಿಗೆ ಕಟ್ಟುವಂತೆ ಕೊಟ್ಟಿದ್ದಾರೆ.

*"ಬೆಳಗಿನಿಂದುಣಿಸಿಲ್ಲ,*
*ನೀರ್ವನಿಯನೀಂಬಿಲ್ಲ, ಪೆಟ್ಟನಲ್ಲದೆ ಬೇರೆ*
*ತಿಂದಿಲ್ಲ, ಕಣ್ಣೀರನಲ್ಲದಿನ್ನೆನುಮಂ*
*ಕುಡಿದಿಲ್ಲ, ಬೆನ್ನಿಗಂಟಿದ ಹೊಟ್ಟೆ ಹಸಿವಿಂದೆ*
*ಗಂಟಲೊಣಗಿದ ನೀರಡಿಕೆಯಿಂದೆ, ರಕ್ತಮಂ*
*ಬಸಿದ ಗಾಯದ ಪಸಿದ ನೋವಿಂದೆ"* [15] ✓

ಮಂಥರೆಯನ್ನು ದ್ವೇಷಿಸುತ್ತಿದ್ದ ಎಲ್ಲರಿಗೂ ಈ ಒಂದು ಚಿತ್ರವೇ ಸಾಕು ಅವಳ ಬಗೆಗಿನ ದ್ವೇಷವನ್ನು ಅಳಿಸಿ ಬಿಡಲು, ಮಂಥರೆಯನ್ನು "ಮಮತೆಯ ಸುಳಿ" ಎಂದೇ ಕುವೆಂಪುರವರು ಕರೆದಿದ್ದಾರೆ.

ಇಲ್ಲಿ ಭರತನಿಗಿಂತ ಮಂಥರೆಗೆ ರಾಮ ಮುಖ್ಯನಾಗುತ್ತಾನೆ. ಮಂಥರೆ ಈಗ ಸಂಪೂರ್ಣವಾಗಿ ವಿಕಾಸ ಹೊಂದುತ್ತಿರುವ ಜೀವಿಯಾಗಿದ್ದಾಳೆ. ಕಾಡಿನ ದಾವಾಗ್ನಿಯಲ್ಲಿ ಒಂದು ಜ್ಯೋತಿಯನ್ನು ಕಾಣುತ್ತಾಳೆ. ಅದನ್ನೇ ರಾಮನೆಂದು ತಿಳಿದು ಮುಂದಾಗುತ್ತಾಳೆ. ಆ ಅಗ್ನಿಯಲ್ಲಿ ಮಂಥರೆಯ ಆತ್ಮ ಒಂದಾಗುತ್ತದೆ. ಅಗ್ನಿಯು ಲೋಕದ ಪಾಪವನ್ನು ದಹಿಸುವ ಪಂಚಭೂತಗಳಲ್ಲಿ ಒಂದಾದ ಅಂಶ. ಅದು ಮಂಥರೆಯನ್ನು ಅಪ್ಪುತ್ತದೆ. ಆ ಬೆಂಕಿಯ ಒಡಲಲ್ಲಿ ರಾಮನನ್ನು ಕಾಣುತ್ತಾಳೆ. ಕೊನೆಗೆ ಮಂಥರೆಯಾತ್ಮ ಅಗ್ನಿರೂಪ ರಾಮನಲ್ಲಿ ಒಂದಾಗುತ್ತದೆ.

ಮಂಥರೆಯ ಸಾವಿನ ನಂತರವೂ ಭರತನ ರಕ್ಷೆಯಾಗಿ ಇರುತ್ತಾಳೆ. ಹದಿನಾಲ್ಕು ವರ್ಷಗಳು ಕಳೆದರೂ ರಾಮನು ಬರದಿದ್ದಾಗ ಭರತನು ಅಗ್ನಿಪ್ರವೇಶಕ್ಕೆ ಮುಂದಾಗುತ್ತಾನೆ. ಆಗ ಯಜ್ಞದ ಅಗ್ನಿಯಿಂದ ಸೂಕ್ಷ್ಮ ತೇಜದ ಸುಂದರ ಮೂರ್ತಿ ಮೈದೋರುತ್ತದೆ. ರಾಮನು ಬರುವ ಸಮಯ ಹತ್ತಿರವಾಗಿದೆ ಎಂದು ಅದು ತಿಳಿಸುತ್ತದೆ. ಭರತನು ನೀನಾರೆಂದು ಕೇಳಿದಾಗ 'ಸದಾ ನಿನ್ನದೇ ಧ್ಯಾನದಲ್ಲಿರುವ ಮಂಥರೆ' ಎಂಬುದಾಗಿ ಆ ಸೂಕ್ಷ್ಮ ತೇಜ ತಿಳಿಸುತ್ತದೆ. ಮಂಥರೆಯ ಹೆಸರನ್ನು ಕೇಳಿ ಭರತನಿಗೆ ಮತ್ತೆ ಹಿಂಸೆಯಾಗುತ್ತದೆ. ಆಗ ಆ ಅಜ್ಞಾತೆಯಾದ ಮಂಥರೆಯ ಆತ್ಮದಿಂದ ಹೊರಡುವ ಮಾತುಗಳು ಹೀಗಿವೆ :

*"ವತ್ಸ, ಕಾರಣಳಲ್ತು; ಬರಿ ಕರಣಮಾ ಕುಬ್ಜೆ*
*ಮಂಥರಾಪ್ರೇಮದಂತ : ಕರಣಮಂ ಕಾಣೆ*
*ನೀಂ, ರಾಮನಂ ಮತ್ತೆ ನಿನ್ನಭ್ಯುದಕಾಗಿ*
*ಪಿಂ ಮರಳ್ದುವುದ್ಯೋಗದೊಳ್ ತೊಡಗಿರಲ್ಕವಳ್*
*ದಾವಾಗ್ನಿಗಾಹುತಿಯಾದಳತ್ತಿ ? ಬಹಿರಂಗದೊಳ್*
*ಆ ಕುಬ್ಜೆ ವಿಕೃತಿಯಂತಂತೆ ಹೊರನೋಟಕಾ*

*ಗೂನಿಗೆಯ್ದುದು ಪಾಪವೇಕ್ಷಿ; ನಾನಯೆ, ನೋಡು*
*ನಿನ್ನ ಮಂಥರೆಯಂತರಾತ್ಮದ ಪುಣ್ಯಲಕ್ಷ್ಮಿ"*[16]

ಈ ಭಾಗವು ಅತ್ಯಂತ ಧ್ವನಿಪೂರ್ಣವಾಗಿದೆ. ಮಂಥರೆ ಇಲ್ಲಿ ಕೇವಲ ವಿಧಿಯ ಕೈಯ ಕಾರಣಿಕಳು ಮಾತ್ರ. ವಿಧಿಯ ಸಂಚಿನಲ್ಲಿ ಬಹು ಮುಖ್ಯ ದಾಳವಾಗಿ ಮಂಥರೆ ಬಳಕೆಯಾಗುತ್ತಾಳೆ. ಕೊನೆಗೆ ರಾಮನಲ್ಲೇ ಒಂದಾಗಿ ಭರತನ ಕಣ್ಣನ್ನು ತೆರೆಸುತ್ತಾಳೆ. ಮುದಿಗೂನಿಯಾಗಿದ್ದ ಮಂಥರೆ ಪುಣ್ಯ ಲಕ್ಷ್ಮಿಯಾಗುತ್ತಾಳೆ. ಅಸ್ತಿತ್ವಕ್ಕಾಗಿ ಹೋರಾಡಿ ಮರೆಯಲಾಗದ ಒಂದು ಪಾತ್ರವಾಗಿ ಎಲ್ಲರ ನೆನಪಲ್ಲೂ ಉಳಿಯುತ್ತಾಳೆ.

ಮಂಥರೆಯ ಪಾತ್ರವನ್ನು ಪುನಃ ಕಟ್ಟುವಿಕೆಯಲ್ಲಿ ಅವಳ ಮೇಲಿದ್ದ ಎಲ್ಲ ನಿಂದೆಗಳೂ, ದ್ವೇಷವನ್ನು ಮಾಸುವಂತೆ ಚಿತ್ರಿಸಿದ್ದಾರೆ. ರಾಮನಿಗೆ ಕನ್ನಡಿ ಹಿಡಿಸುವ ಮೂಲಕ ಅವನ ವಿಶ್ವವ್ಯಕ್ತಿತ್ವವನ್ನು ನೆನಪಿಸಿದ ಮಂಥರೆ ರಾಮನ ಆತ್ಮೋದ್ಧಾರಕ್ಕೆ ಕಾರಣಕರ್ತಳು ಮಾತ್ರವಲ್ಲ, ಕೈಕೆ, ಸೀತೆ, ಊರ್ಮಿಳೆ, ಮಂಡೋದರಿಯರಂಥ ಪತಿವ್ರತೆಯರ ಪಾತಿವ್ರತ್ಯದ ಅರಿವು ಲೋಕಕ್ಕೆ ಪರಿಚಯವಾಯಿತು. ಅಹಲ್ಯೆಯ ಪಾಪವಿಮೋಚನೆಯಾಯಿತು. ರಾಮ, ರಾವಣ, ಕುಂಭಕರ್ಣ, ವಾಲಿ, ಮಾರೀಚ, ಚಂದ್ರನಖಿ, ಶಬರಿ ಮುಂತಾದ ಚೇತನಗಳ ಮನೋವಿಕಾಸಕ್ಕೆ ಕಾರಣಳಾಗುತ್ತಾಳೆ. ಅವಳು ಸತ್ತ ನಂತರವೂ ಭರತನ ಹಿಂದಿದ್ದು ಅವನನ್ನು ಕಾಯುತ್ತಾಳೆ. ಅಶರೀರೆಯಾಗಿ ಭರತನ ರಕ್ಷೆಯಾಗಿ ನಿಂತಿರುತ್ತಾಳೆ. ಅಲ್ಲದೆ ರಾಮನು ಸುರಕ್ಷಿತವಾಗಿ ಅಯೋಧ್ಯೆಗೆ ಹಿಂತಿರುಗುವಂತೆ ಮಾಡುತ್ತಾಳೆ ಮತ್ತು ಭರತನಿಗೆ ಈ ಸಿಹಿ ಸುದ್ದಿಯನ್ನು ಸಹ ಕೊಡುತ್ತಾಳೆ. ನಂತರ ಸಂತೃಪ್ತಗೊಂಡ ಆತ್ಮದಿಂದ ಮುಕ್ತಿಹೊಂದುತ್ತಾಳೆ.

ಮಂಥರೆಯ ಜನ್ಮತಹಃ ಉದ್ದೇಶವನ್ನು ಸೀತೆಯು ತ್ರಿಜಟೆಗೆ ಹೇಳುವಲ್ಲಿ ಅವಳ ಮಹತ್ವದ ಅರಿವಾಗುತ್ತದೆ.

*"ನನಗೆ, ರಘುನಾಥರಿಗೆ*
*ಮೇಣ್ ರಾಕ್ಷಸೇಂದ್ರಂಗೆ ಮೂವರ್ಗಮವರವರ*
*ಕರ್ಮಾನುಸಾರಿ ಜನ್ಮೋದ್ದೇಶ ಸಾಧನೆಗೆ*
*ಮೇಣಾತ್ಮ ವಿಕಸನದ ಪರಿಣಾಮಸಿದ್ಧಿಗೆ*
*ಸಹಾಯಮಾದುದು ಮಂಥರೆಯ ಮೂಲದೀ ಬೃಹತ್*
*ದುರ್ಘಟನೆ, ಇನ್ನನಿತು ಜೀವರಿಗೆ ತಂತಮ್ಮ*
*ಕರ್ಮಕ್ಷಯತೆ ಮತ್ತೆ ಧರ್ಮಾಭ್ಯುದಯರೆದು*
*ನಿಮಿತ್ತಮಾದುದೋ ಪೇಳ್ವರುರ್!"*17

ಹೀಗೆ ಇಡೀ ರಾಮಾಯಣದ ಜೀವಶಕ್ತಿಯಾಗಿ ಮಂಥರೆ ಮೆರೆದಿದ್ದಾಳೆ. ಮಂಥರೆಯಿಲ್ಲದಿದ್ದರೆ ಇಡೀ ರಾಮಾಯಣವೇ ಘಟಿಸುತ್ತಿರಲಿಲ್ಲವೇನೋ. ವಿಧಿ ಮಂಥರೆಯನ್ನು ಬೆರಳಾಗಿ ಮಾಡಿಕೊಂಡು ತ್ರೇತಾಯುಗವನ್ನು ಮಿಡಿದು ರಾಮಾಯಣ ಮಹಾ ಗಾನವನ್ನು ನುಡಿಸಿತೆಂಬುದು ಧ್ವನಿತವಾಗುತ್ತದೆ.

ಮಂಥರೆಯ ಈ ಬಗೆಯ ರಾಜಕೀಯ ಹಾಗೂ ಸಾಂಸ್ಕೃತಿಕ ನೆಲೆಗಳನ್ನು ಪುನರ್‌ಮೌಲ್ಯಮಾಪನಕ್ಕೆ ಗುರಿಪಡಿಸುವುದರ ಮೂಲಕ ಹೊಸ ವಿಚಾರಧಾರೆಗಳನ್ನು ಕುವೆಂಪು ಕಟ್ಟಿಕೊಟ್ಟಿದ್ದಾರೆ.

## ಅಡಿ ಟಿಪ್ಪಣಿ

1. ಶ್ರೀ ರಾಮಾಯಣ ದರ್ಶನಂ, ಅಯೋಧ್ಯಾ ಸಂಪುಟ, ಕುವೆಂಪು ,
   ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, 1971, ಪು. 34
2. ಅದೇ, ಪು. 33
3. ಅದೇ , ಪು. 27
4. ಕುವೆಂಪು ಪುನರಾವಲೋಕನ, ಡಾ॥ ಜಿ.ಎಸ್. ಶಿವರುದ್ರಪ್ಪ ,ಬೆಂಗಳೂರು 2005, ಪು. 57
5. ಶ್ರೀ ರಾಮಾಯಣ ದರ್ಶನಂ, ಪಾತ್ರಲೋಕ ಡಾ॥ ಎಚ್.ಕೆ. ಲಕ್ಕಪ್ಪಗೌಡ, ಬೆಂಗಳೂರು 2006, ಪು. 298
6. ಶ್ರೀ ರಾಮಾಯಣ ದರ್ಶನಂ, ಅಯೋಧ್ಯಾಕಾಂಡ, ಪು. 59
7. ಅದೇ , ಪು. 63
8. ಅದೇ, ಪು. 73
9. ಪಶ್ಚಿಮದ ಸ್ತ್ರೀವಾದಿ ವಿಮರ್ಶಾ ಪಂಥಗಳು ಡಾ॥ ಬಿ. ಎನ್. ಸುಮಿತ್ರಾಬಾಯಿ ಹಂಪಿ ಕನ್ನಡ
   ವಿಶ್ವವಿದ್ಯಾಲಯ 2003, ಪು. 15
10. ಶ್ರೀ ರಾಮಾಯಣ ದರ್ಶನಂ, ಅಯೋಧ್ಯಾ ಸಂಪುಟ, ಪು. 23

## ಆ. ಸೀತೆ : ಸ್ತ್ರೀ ಶಕ್ತಿ ಕಟ್ಟುವ ಪ್ರತೀಕ

ಸೀತೆ ಸ್ತ್ರೀ ಶಕ್ತಿಯ ಪ್ರತೀಕವಾಗಿ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ ಚಿತ್ರಿತವಾಗಿದ್ದಾಳೆ. ಹೆಣ್ಣೆಂದರೆ ತ್ಯಾಗ, ಕರುಣೆ, ದಯೆ ಹೀಗೆ ಕೆಲವೊಂದು ಗುಣಗಳಿಗೆ ಬದ್ಧಳನ್ನಾಗಿಸುತ್ತಾ ಅವಳನ್ನು ಅದರಲ್ಲೇ ಸೀಮಿತಗೊಳಿಸುವ ಪ್ರಯತ್ನವನ್ನು ಪುರುಷ ಪ್ರಧಾನ ಸಮಾಜ ಬಹು ಹಿಂದಿನಿಂದಲೂ ಮಾಡುತ್ತಾ ಬಂದಿದೆ. 'ಸೀತೆ' ಎಂಬುದು ಒಂದು ಆದರ್ಶಮಾದರಿಯಾಗಿ ಭಾರತೀಯ ಪರಂಪರೆಯಲ್ಲಿ ಚಿತ್ರಿತಗೊಂಡಿದ್ದಾಳೆ. ಜನಪದರ ಪ್ರಕಾರ ಸೀತೆ ಬಹು ದೊಡ್ಡ ಪವಿತ್ರವಾದ, ಮೌಲ್ಯವುಳ್ಳ ಆದರ್ಶ ಕಲ್ಪನೆಯ ಪಾತ್ರವಾಗಿ ಒಡಮೂಡಿದ್ದಾಳೆ. ಇಲ್ಲಿ ಒಂದು ಹೆಣ್ಣನ್ನು ತೆಗಳುವಾಗ ಅಥವಾ ಹೊಗಳುವಾಗ 'ಇವಳೇನು ಸೀತೆನಾ?' ಎಂಬಂತಹ ಮಾತುಗಳನ್ನು ಸಾಮಾನ್ಯವಾಗಿ ಆಡುತ್ತಾರೆ. ಸ್ತ್ರೀಯರ ಮನೋಭೂಮಿಕೆಯಲ್ಲಿ ಸೀತೆ ಅತ್ಯುಚ್ಛ ಮಾರ್ಗದರ್ಶಕಿಯಾಗಿ ಅವರ ಪ್ರತಿ ನಡೆನುಡಿಗಳಲ್ಲಿ ಸಹಚಾರಿಣಿಯಾಗಿ ಕಂಡು ಬರುತ್ತಾಳೆ. ವಾಲ್ಮೀಕಿಯು ಸೀತೆಯನ್ನು ಸ್ತ್ರೀಲೋಕದ ಅನುಪಮ ರತ್ನವಾಗಿ ಚಿತ್ರಿಸಿದ್ದಾರೆ. ಸರ್ವಗುಣ ಸಂಪನ್ನೆಯಾದ ಸೀತೆಯ ಪಾತ್ರವನ್ನು ಕುವೆಂಪುರವರು ಇನ್ನಷ್ಟು ಪ್ರಕಾಶಿಸುವ ಪ್ರಯತ್ನವನ್ನು ತಮ್ಮ ಕಾವ್ಯದಲ್ಲಿ ಮಾಡಿದ್ದಾರೆ.

ಸೀತೆಯು 'ಶ್ರೀ ರಾಮಾಯಾಣದರ್ಶನಂ' ಮಹಾಕಾವ್ಯದಲ್ಲಿ ಜನ್ಮದ ಹಿನ್ನೆಲೆಯಿಂದಲೇ ವಿಶೇಷತೆಯನ್ನು ಪಡೆದಿದ್ದಾಳೆ. ಹಾಗೂ ವಿಕಾಸಶೀಲತೆಯನ್ನು ಪಡೆಯುವ ಪಾತ್ರವಾಗಿದೆ. ಜನಕರಾಜನಿಗೆ ನೇಗಿಲಗೆರೆಯಲ್ಲಿ ಸೀತೆ ದೊರಕಿದರಿಂದ ಅವಳು ಪ್ರಕೃತಿರೂಪಿಣಿ ಎಂಬುದು ಆರಂಭದಿಂದಲೇ ದರ್ಶನವಾಗುತ್ತದೆ. ಕುವೆಂಪುರವರು ತಮ್ಮ ಕಾವ್ಯದಲ್ಲಿ ಸೀತೆಯ ವಿಕಾಸಶೀಲತೆಯ ದರ್ಶನವನ್ನು ಮಾಡಿ ಕೊಟ್ಟಿರುವುದು ಪ್ರಮುಖ ವಿಷಯವಾಗಿದೆ. "ಲೋಕ ಹುಟ್ಟಿದಾಗಿನಿಂದ, ಆಗಿ ಹೋದ ನಿಜವಾದ ಮಹಾಕವಿಗಳೆಲ್ಲರೂ ಹೇಳಿರುವ ಸತ್ಯ ಒಂದೇ! ಆದರೆ ವೈವಿಧ್ಯವಿರುವುದು ಅವರು ಹೇಳಿರುವ ರೀತಿಯಲ್ಲಿ. ನಾವು ಕವಿಗಳನ್ನು ಓದಬೇಕೆಂದು ಹಂಬಲಿಸುವುದು ವಿವಿಧ ಸತ್ಯದರ್ಶನಾಕಾಂಕ್ಷೆಯಿಂದಲ್ಲ. ಅವರ 'ರೀತಿ'ಯ ರುಚಿಗಾಗಿ...... ಎಂದರೆ ರೀತಿಯೇ ಕಾವ್ಯದ ತಿರುಳೆಂದಲ್ಲ. ದರ್ಶನವೇ ಅದರ ತಿರುಳು. ರೀತಿ ಅರ ಹೊರ ಮೈ ದರ್ಶನವಿಲ್ಲದ ಕಾವ್ಯ ಶೀಲವಿಲ್ಲದ ಸುಂದರಿಯಂತೆ"[1] ಹೀಗೆ ಕುವೆಂಪುರವರು ಸೀತೆಯ ಪಾತ್ರವನ್ನು ಅಮೂರ್ತ ನೆಲೆಯಲ್ಲಿ ದರ್ಶಿಸಿದ್ದಾರೆ.

ಈ ಮಹಾಕಾವ್ಯದಲ್ಲಿ ಸೀತೆ – ರಾಮರ ಪರಸ್ಪರ ಭೇಟಿಯಾಗುವುದು ಶಿವಧನಸ್ಸನ್ನು ರಾಮ ಮುರಿಯುವುದಕ್ಕೆ ಮುನ್ನವೆ ಸೀತೆ ರಾಮನನ್ನು ಹೂದೋಟದಲ್ಲಿ ಮೊದಲಬಾರಿಗೆ ನೋಡುತ್ತಾಳೆ. ರಾಮನಬಗೆಗೆ ತನದಾಗುತ್ತಿದ್ದ ಅನುಭೂತಿಯನ್ನು ಸೀತೆ ಊರ್ಮಿಳೆಯಲ್ಲಿ ಹೀಗೆ ಹೇಳಿಕೊಳ್ಳುತ್ತಾಳೆ:

*"ತಂಗೆ, ನಾನಿನ್ನೆಗಂ*
*ಪೇಳ್ದೆನಿಲ್ಲೊಂದಾತ್ಮ ವಿಷಯಂ, ಬಾಲ್ಯದಿಂ, ಕೇಳ್*
*ನನಗರ್ಥವಾಗದೊಂದನುಭವಂ ತಾ ನಿಚ್ಚಮುಂ*
*ಬಂದೆನ್ನನೊಳಕೊಳ್ವುದವ್; ಗಗನ ಮಂಡಲಮೆ*
*ಬಂದೆನ್ನ ಮೆಯ್ಯಪ್ಪುತರ್ದೆಯೊಳಗೆ ಸೇರ್ವಂತೆ;*
*ಕಡಲುಕ್ಕಿ ಮೇರೆ ಮೀರುತೆ ಪಾಯ್ದು ಮುಳುಗಿಸಲ್*

*ನಾನೆ ಕಡಲೊಡತಿಯಪ್ಪಂತೆ ; ಪೃಥಮಿಯೆ ಕರಗಿ*
*ಪೆಣ್ಣ ಸುಳಿಯಾಗು ತೆನ್ನಯ ತೊಡೆಯ ತೊಟ್ಟಲೊಳ್*
*ನಲಿವಂತೆ ತೊರೆ ಬನಂ ಭೂಮಿ ಬಾನ್ ಗಿರಿಪಂಕ್ತಿ*
*ಪಗಲಿರುಳ್ ಚುಕ್ಕಿ ತಿಂಗಳ್ ನೇಸರೆಲ್ಲಮುಂ*
*ಮೆಯ್ಯಾಗುತಾಂ ತ್ರೈಭುವನಲಕ್ಷ್ಮಿಯಪ್ಪಂತೆ*
*ಚಿದರಿದನ್ ಮೊದಮೊದಲ್, ಪೇಳಲೆಂದಳಸಿದರೆ*
*ತೊದಲಾಯ್ತು, ಮೂಗಿ ಕಂಡದ್ಭುತದವೋಲಾಯ್ತು*
...........................................................................
*ಮತ್ತೊಮ್ಮೆ ತನಗಾದುದನುಭವಂ ಏನೆಂಬೆನಾ*
*ತಿರೆಕಡಲ್ ಚುಕ್ಕಿ ಬಾನುಗಳೆಲ್ಲವೊಂದಾಗಿ ತನ್ನ*
*ಮೈಯವತರಿಸಿದೋಲ್ ॥²*

ಹೀಗೆ ಭೂಮಿ, ಕಡಲು, ಬಾನು, ಗಿರಿ ತಾರೆ, ಚಂದ್ರ, ಸೂರ್ಯ ಮುಂತಾದ ನಿಸರ್ಗದ ಮೂಲವೇ ತನ್ನಲ್ಲಿ ಸೇರಿದಂತೆ ಶ್ರೀರಾಮಚಂದ್ರನು ತನ್ನ ಹೃದಯದಲ್ಲಿ ಅಂತರ್ಗತನಾದನೆಂದು ತಿಳಿಸುತ್ತಾಳೆ. ಅಂದರೆ ಪಂಚಭೂತಗಳೂ ರಾಮಚಂದ್ರನ ರೂಪದಲ್ಲಿ ಆಕೆಯಲ್ಲಿ ಮಿಳಿತಗೊಂಡಿವೆ. ರಾಮಚಂದ್ರನನ್ನು ಕಾಣುವುದು ಸಾಧಾರಣ ವಿಷಯವಲ್ಲ. ಏಕೆಂದರೆ ರಾಮ ವಿಭೂತಿ ಪುರುಷ, ಆ ನಿಜ ಮೂರುತಿಯನ್ನು ಗುರುತಿಸುವರಿಗೂ ಆ ವಿಭೂತಿ ಸಿದ್ಧಿಸಿದೆ ಎಂಬುದು ಸೂಚ್ಯವಾಗುತ್ತದೆ. ಅನಂತರ ಹೂದೋಟದಲ್ಲಿ ಕಂಡ ರಾಮನಲ್ಲಿ ಆ ಮೂರ್ತಿಯನ್ನು ಗುರುತಿಸುತ್ತಾಳೆ. ಇಲ್ಲಿ ಸೀತಾರಾಮರ ಪರಸ್ಪರ ಸಂಬಂಧ ಎರಡು ಶಕ್ತಿಗಳ ಸಮನ್ವಯದಂತೆ ಅಭಿವ್ಯಕ್ತಗೊಳಿಸಲಾಗಿದೆ. ರಾವಣ ಬಂದಾಗ ಶಿವಧನಸ್ಸು ಅವನಿಗೆ ಬಾಗದಿರಲಿ ಎಂದು ಶಿವನನ್ನು ಪ್ರಾರ್ಥಿಸಿದ ಸೀತೆ ರಾಮ ಶಿವ ಧನಸ್ಸನ್ನು ಮುರಿಯಲು ಬಂದಾಗ ರಾಮನಿಗೆ ಒಲಿಯಲಿ ಎಂದು ಶಿವನನ್ನು ಬೇಡುತ್ತಾಳೆ. ರಾಮ ಮುಂದೆ ಸೀತೆಯ ಎಲ್ಲ ಸಾಧನೆಗಳಿಗೂ ಸ್ಥೈರ್ಯವಾಗಿ ಅವಳನ್ನು ಉಚ್ಚರಿಸುತ್ತಾನೆಂಬುದನ್ನು ಇದು ಸೂಚಿಸುತ್ತದೆ.

ಸೀತಾ ರಾಮರ ದಾಂಪತ್ಯ ಜೀವನ ವಿವರಗಳ ಬಗ್ಗೆ ವಾಲ್ಮೀಕಿ ಯಾವ ವಿವರಗಳನ್ನು ಕೊಡುವುದಿಲ್ಲ. ಆದರೆ ಕುವೆಂಪುರವರು ಸೀತಾರಾಮರ ನವದಾಂಪತ್ಯದ ಉತ್ತಮ ಚಿತ್ರಣವನ್ನು ಕೊಡುತ್ತಾರೆ. ಇವರಿಬ್ಬರ ಮೈಮನಗಳೆರಡೂ ಅವಿಭಾಜ್ಯವಾಗಿ ಬೆರೆತುಕೊಂಡು ಒಂದೇ ಆಗಿತ್ತೆಂದು ಹೇಳುತ್ತಾ ಅವರ ಮುಂದಿನ ಸಚ್ಚಾರಿತ್ರ್ಯಕ್ಕೆ ವಿಕಾಸಕ್ಕೆ ಭದ್ರಬುನಾದಿಯನ್ನು ಕಟ್ಟಿಕೊಡುತ್ತಾರೆ:

*"ತಿಂಗಳೊ ತೇನೆಯೊಲಿವಂತೆ ಸೀತಾಕಾಂತೆ*
*ತೇಲಾಡಿದಳು ತನ್ನ ರಮಣನಾನಂದಕ್ಕೆ*
*ತನ್ನೆಲ್ಲಮಂ ನಲಿದು ನೈವೇದ್ಯಮಂ ನೀಡಿ*
*ತನ್ನತನವನೆ ಸೊನ್ನೆ ಮಾಡಿ॥3*
*"ಶ್ರೀರಾಮ ಪ್ರೇಮದೊಳೆ ಕಂಡಳ್ ಜನಕ ಜಾತೆ*
*ಜೀವನದ ಪರಮಪುರುಷಾರ್ಥಮಂ, ಮೇಣಖಿಳ*
*ಸೃಷ್ಟಿಲೀಲಾ ಮಹೋದ್ದೇಶಮಂ"4*

ಹೀಗೆ, ಸೀತೆಯು ರಾಮನಲ್ಲಿಯೇ ತನ್ನ ಜೀವಿತದ ಪರಮೋದ್ದೇಶವನ್ನು ಕಾಣುತ್ತಾಳೆ. ಇವರಿಬ್ಬರ ದಾಂಪತ್ಯ ಚಿತ್ರಣದಿಂದ ಅವರ ವಿವಾಹ ಮತ್ತು ಪ್ರೇಮವು ಸೀಮಿತೋದ್ದೇಶವಾದುದಲ್ಲ. ಅದು ವಿಶ್ವಪ್ರೇಮದ ಸಂಕೇತ ಎನ್ನುವ ದರ್ಶನವನ್ನು

ಕುವೆಂಪು ಕಟ್ಟಿಕೊಡುತ್ತಾರೆ. ಸೃಷ್ಟಿಶೀಲತೆಗೆ ಕಾರಣವಾಗುವ ಅರ್ಧನಾರೀಶ್ವರ ಸಂಬಂಧವೆಂಬಂತೆ ಬಣ್ಣಿಸಿದ್ದಾರೆ.

ಶ್ರೀ ರಾಮನು ಪಿತೃವಾಕ್ಯಪರಿಪಾಲನೆಗಾಗಿ ವನವಾಸಕ್ಕೆ ಹೋಗುವುದಾಗಿ ಸೀತೆಗೆ ತಿಳಿಸಿದಾಗ ಆಕೆ ಸಾಮಾನ್ಯ ಸ್ತ್ರೀಯರಂತೆ ದುಃಖಿಸುವುದಿಲ್ಲ. ಹಾಗೂ ಅಳುಕುವುದಿಲ್ಲ. ಅವನ ವನವಾಸದಲ್ಲಿ ಅವಳೂ ಭಾಗಿಯಾಗುವುದಾಗಿ ತಿಳಿಸುತ್ತಾಳೆ. ಪ್ರಕೃತಿಯ ಮಗಳಾದ ಸೀತೆ ಮತ್ತೆ ಪ್ರಕೃತಿಗೆ ಮರಳುವ ಸುವರ್ಣಾವಕಾಶ ಅವಳ ಪಾಲಿಗೆ ಬರುತ್ತದೆ. ಸೀತೆಗೆ ನಿಜವಾಗಿ ಅವಳ ಆತ್ಮವಿಕಾಸ ಆರಂಭವಾಗುವುದು ಇಲ್ಲಿಂದಲೇ. ಹಂತಹಂತವಾಗಿ ಮೇಲೇರುತ್ತಾ ಹೋಗುತ್ತಾಳೆ. ಸೀತೆಯನ್ನು ಯಾವ ಕಾರಣಕ್ಕಾಗಿ ನಾವು ಪರಮಶ್ರೇಷ್ಠ ಸ್ಥಾನವನ್ನು ಕೊಟ್ಟಿದ್ದೇವೆ ಎಂಬುದನ್ನು ಅವಲೋಕಿಸಿದಾಗ ಸೀತೆ ಶ್ರೀರಾಮನ ಪತ್ನಿಯಾಗಿ ರಾಮನ ಜೊತೆ ಎಷ್ಟೆಲ್ಲ ಕಷ್ಟಗಳನ್ನು ಅನುಭವಿಸಿದವಳು, ರಾವಣ ಅಪರಹರಿಸಿದಾಗಲೂ ರಾಮನನ್ನು ನೆನೆಯುತ್ತಾ ಬದುಕಿದವಳು. ಕೊನೆಗೆ ತನ್ನ ಪಾವಿತ್ರತೆಯ ಪ್ರಮಾಣೀಭೂತಕ್ಕೆಂದು ಅಗ್ನಿಗೆ ಹಾರಿದವಳು. ಹೀಗೆ ಒಂದು ಹೆಣ್ಣು ಹುಟ್ಟಿದಾಗಿನಿಂದ ಕೇವಲ ಕಷ್ಟಗಳನ್ನೇ ಅನುಭವಿಸಿದಾಗ ಆಕೆಯ ಬಗ್ಗೆ ಕರುಣೆ, ಅನುಕಂಪ ಮೂಡುವುದು ಸಹಜ. ಆದರೆ ಈ ಕಾರಣಕ್ಕಾಗಿಯಷ್ಟೇ ಸೀತೆ ಆದರ್ಶವಾಗಿಲ್ಲ. ಪುರುಷ ಪ್ರಧಾನ ಸಮಾಜದ ಎಲ್ಲ ನಿಯಮಗಳನ್ನು ಅನುಸರಿಸುತ್ತಾ ಅದರಿಂದಲೇ ತನ್ನ ಶಕ್ತಿಯನ್ನು ಜಗತ್ತಿಗೆ ತೋರಿದ ಮಹಾಚೈತನ್ಯ ಶಕ್ತಿ. ಪುರುಷ ಸಮಾಜ ನಿರ್ಮಿಸಿದ ಪ್ರತಿ ನಿಯಮಗಳಿಗೆ ತನ್ನನ್ನು ತಾನು ಒಡ್ಡಿಕೊಂಡು ಅದನ್ನು ಗೆಲ್ಲುತ್ತಾ ತನ್ನ ಶಕ್ತಿಯನ್ನು ವರ್ಧಿಸಿಕೊಂಡವಳು. ಆ ಕಾರಣವಾಗಿ ಕುವೆಂಪು ಮಹಾಕಾವ್ಯದ ಸೀತೆ ಸ್ತ್ರೀ ಶಕ್ತಿಯ ಪ್ರತೀಕವಾಗಿ ತೋರುತ್ತಾಳೆ. ತನ್ನ ದೈವತ್ವದ ಗುಣದಿಂದ ದುಷ್ಟರನ್ನು ಸನ್ಮಾರ್ಗದತ್ತ ತರುತ್ತಾಳೆ.

ಮುಂದೆ ವನವಾಸದ ಅವಧಿ ಮುಗಿಯುವವರೆಗೂ ಸೀತೆ ತನ್ನ ಯಾವುದೇ ರೀತಿಯ ಸುಖದಿಂದ ದೂರವಾಗಿ ಶುದ್ಧ ತಪಸ್ಸನ್ನಾಚರಿಸುವುದು ಅವಳ ಅನನ್ಯತೆಯನ್ನು ತೋರುತ್ತದೆ. ವನವಾಸಕ್ಕೆ ಹೊರಡುವಾಗ ವಾಲ್ಮೀಕಿ ರಾಮಾಯಣದಲ್ಲಿ ಸೀತೆ ದಶರಥ ತರಿಸಿಕೊಟ್ಟ ನಾನಾ ರೀತಿಯ ಆಭರಣಗಳನ್ನು ಧರಿಸಿಕೊಂಡು ಅಲಂಕರಿಸಿಕೊಳ್ಳುತ್ತಾಳೆ. ಆದರೆ ಕುವೆಂಪುರವರ ಮಹಾಕಾವ್ಯದಲ್ಲಿ ಆಕೆ ನಾರುಡೆಯನ್ನುಟ್ಟು ಸಂತೋಷದಿಂದ ವನವಾಸಕ್ಕೆ ಹೊರಡುತ್ತಾಳೆ. ರಾಜಭೋಗದಿಂದ ವಂಚಿತಳಾದೆನೆಂಬ ಯಾವ ಲೋಭವೂ ಅವಳಲ್ಲಿ ಕ್ಷಣ ಕಾಲವೂ ಗೋಚರವಾಗುವುದಿಲ್ಲ. ಸ್ವಾಮಿ ವಿವೇಕಾನಂದರು ಸೀತಯ ಪಾತ್ರವನ್ನು ಹೀಗೆ ಪರಿಚಯಿಸುತ್ತಾರೆ:

**"Sita is a typical of India, the idealized India, Sita is the name in India for everything is Good, pure and holy; we are children of Sita and they are all struggling to be Sita the patient, all – suffering, every faithful ever pure wife (Ramayana)"[5]**

ವಿವೇಕಾನಂದರು ವ್ಯಾಖ್ಯಾನಿಸುವಂತೆ ಭಾರತೀಯ ಪಾರಂಪರಿಕ ಸಮಾಜ ಬಯಸುತ್ತಿದ್ದುದು ಈ ಮಾದರಿಯ ಹೆಣ್ಣನ್ನು. ಪ್ರತಿಯೊಂದು ಹೆಣ್ಣು ತಾನು ಈ ಬಗೆಯ ಸೀತೆಯಾಗಬೇಕೆಂದು ಅಪೇಕ್ಷಿಸಿದವರಾಗಿದ್ದರು. ಹಾಗೆಯೇ ಹೆಣ್ಣು

ಬದುಕಬೇಕೆಂಬುದು ಸಮಾಜದ ಒತ್ತಾಯವೂ ಕೂಡ ಆಗಿತ್ತು. ಇದಕ್ಕೆ ವಿರುದ್ಧವಾಗಿ ನಡೆದರೆ ಆಕೆ ಬದುಕಲು ಅರ್ಹಳೇ ಅಲ್ಲವೆಂಬಂತೆ ನಂಬಿಸಲಾಗುತ್ತಿತ್ತು.

ಡಾ॥ ಎಚ್.ಎಸ್. ಶ್ರೀಮತಿಯವರು ಭಾರತೀಯ ಪರಂಪರೆಯಲ್ಲಿ ಕಂಡು ಬರುವ ಮೂರು ಬಗೆಯ ಸ್ತ್ರೀ ಮಾದರಿಗಳನ್ನು ಪರಿಚಯಿಸುತ್ತಾರೆ. ಮೊದಲನೆಯದರಲ್ಲಿ ಪಂಚಪತಿವ್ರತೆಯರಾದ ಅಹಲ್ಯಾ, ದ್ರೌಪದೀ, ತಾರಾ, ಕುಂತಿ ಮತ್ತು ಮಂಡೋದರಿಯನ್ನು ತಂದರೆ, ಎರಡನೆಯ ಮಾದರಿಯಲ್ಲಿ ಸೀತೆ, ಸಾವಿತ್ರಿ, ಪಾರ್ವತಿಯರು ಬರುತ್ತಾರೆ. ಮೂರನೆಯ ಮಾದರಿ ಹೊಸ ಕಾಲದವರದಾಗಿದ್ದು ಶಕುಂತಲೆ ದಮಯಂತಿ ಮುಂತಾದವರನ್ನು ತರುತ್ತಾರೆ. ಸೀತೆ, ಸಾವಿತ್ರಿ, ಪಾರ್ವತಿ ಎರಡನೇ ಮಾದರಿಯಲ್ಲಿ ಬರುವ ಇವರು ಪತಿಯನ್ನೇ ತಮ್ಮ ಆರಾಧ್ಯದೈವವನ್ನಾಗಿ ಮಾಡಿಕೊಂಡವರು. ಆದರ್ಶತೆಯ ಹೆಸರಿನಲ್ಲಿ ತಮ್ಮ ವ್ಯಕ್ತಿತ್ವವನ್ನೇ ಇಲ್ಲವಾಗಿಸಿಕೊಂಡವರು. ಆದರೆ ಕುವೆಂಪುರವರು ತಮ್ಮ ಕಾವ್ಯದಲ್ಲಿ ಉಳಿದ ಸ್ತ್ರೀ ಪಾತ್ರಗಳಿಗಿಂತ ಭಿನ್ನವಾಗಿ ಸೀತೆಯ ಮನೋಭೂಮಿಕೆಯನ್ನು ಕಟ್ಟಿಕೊಡುತ್ತಾರೆ. ಸೀತೆಗೆ ರಾವಣನನ್ನು ನಾಶಮಾಡುವ ದೈವೀಶಕ್ತಿ ಇದ್ದರೂ ಆಕೆ ಹಾಗೆ ಮಾಡದೆ ಆತನ ಮನಃಪರಿವರ್ತನೆಯನ್ನು ಮಾಡುವಲ್ಲಿ ವಿಶೇಷ ಪಾತ್ರವಹಿಸುತ್ತಾಳೆ. ಕೊನೆಗೆ ರಾವಣನಿಂದಲೇ 'ಹದಿಬದಿಯರಧಿದೇವಿ' ಎಂಬ ಪ್ರಶಂಸೆಯನ್ನು ಪಡೆಯುತ್ತಾಳೆ.

ಸೀತೆ ರಾಮನಲ್ಲಿ ಎಳ್ಳಿನಿತೂ ಕುಂದನ್ನು ಕಾಣಲಾರಳು ಪುರುಷಶಕ್ತಿಯಾದ ರಾಮನನ್ನು ಪ್ರಕೃತಿಸ್ವರೂಪಿಣಿಯಾದ ಸೀತೆ ಬಹಳವಾಗಿ ನಂಬಿದ್ದಳು. ಆದರೆ ಗಂಡ ಮಾಡಿದುದೆಲ್ಲವನ್ನು ಕಣ್ಮುಚ್ಚಿ ಒಪ್ಪುವ ಮುಗ್ಧೆಯೂ ಅಲ್ಲವೆಂಬುದನ್ನು ಕವಿ ಹೇಳಬಯಸುತ್ತಾರೆ. ಅವನ ನಡೆನುಡಿಯನ್ನು ಉಜ್ಜಿ ಪರೀಕ್ಷಿಸುವ ಧೈರ್ಯವೂ, ನೈತಿಕತೆಯೂ, ಸಾತ್ವಿಕ ಭಾವವೂ ಆಕೆಗಿದೆ. ರಾಕ್ಷಸರಿಂದ ಋಷಿಗಳಿಂದಾಗುತ್ತಿದ್ದ ತೊಂದರೆಯನ್ನು ತಪ್ಪಿಸಲು ರಕ್ಕಸವಧೆಯನ್ನು ಮಾಡುವೆನೆಂದು ಪ್ರತಿಜ್ಞೆಯನ್ನು ಮಾಡಿದ ರಾಮನಿಗೆ ಸೀತೆ ವಿನಯವಾಗಿ ಪ್ರಶ್ನಿಸುತ್ತಾಳೆ:

*"ಒರ್ವನನ್ಯಾಯಿಯಾದೊಡೇಂ*
*ಸರ್ವರಾಕ್ಷಸರೆಂತು ಸಂಹಾರಕರ್ಹರ್ ಬೈ*
*ಕ್ಷಾತ್ರಕೇಂ ಕ್ರೌರ್ಯಂ ಕಿರೀಟಮೇ?"* [6]

ಒಬ್ಬ ಮಾಡುವ ತಪ್ಪಿಗೆ ಎಲ್ಲರಿಗೂ ಶಿಕ್ಷೆಯೇಕೆ? ಕ್ಷತ್ರಿಯ ಎಂದರೆ ಕ್ರೌರ್ಯವೆ? ಎಂದು ನ್ಯಾಯಬದ್ಧ ರೀತಿಯಲ್ಲಿ ಪ್ರಶ್ನಿಸುತ್ತಾಳೆ. ಸೀತೆಯು ರಾಮನ ಸಾಹಚರ್ಯದಿಂದ ಮತ್ತಷ್ಟು ಕ್ರಿಯಾಶಕ್ತಿಯನ್ನು ವರ್ಧಿಸಿಕೊಳ್ಳುತ್ತಾಳೆ. ಮುಂದೆ ವನವಾಸದ ಅವಧಿಯನ್ನು ಕಳೆಯಲು ಅಗಸ್ತ್ಯ ಮಹರ್ಷಿಯು ಪಂಚವಟಿಯನ್ನು ಸೂಚಿಸುತ್ತಾ ಅವರಾಡುವ ಮಾತುಗಳು ಸೀತೆಯ ಮುಂದಿನ ಧ್ಯೇಯವನ್ನು ನಿರೂಪಿಸುವಂತಿವೆ:

*"ಮಗಳೆ ಸೀತಾದೇವಿ,*
*ನಿನ್ನಳಲ ಲೆಕ್ಕಿಸದೆ ಪತಿ ಹಿತಕರಿಯಾಗು;*
*ಲೋಕಶಂಕರಿಯಾಗು; ಮೇಣ್ ಯಮ ಭಯಂಕರಿಯಾಗು*
*ಲೋಕಮೂರಕೆ ಶೋಕವಾಗಿಹ ನಿಶಾಚರರ*
*ನಿಷ್ಠುರ ನೀಚಕುಲಕೆ"* [7]

ಸೀತಾದೇವಿಯಿಂದ ಮುಂದಾಗುವ ಮಹಾನ್ ಕಾರ್ಯಕ್ಕೆ ಇದೇ ಪೀಠಿಕೆಯಾಗಿ ಬಂದಿರುವುದನ್ನು ಗುರುತಿಸಬಹುದಾಗಿದೆ. ಪಂಚವಟಿಯು ಸೀತೆಯ ಚಾರಿತ್ರ್ಯವನ್ನು ಪರೀಕ್ಷಿಸುವ ಪ್ರಯೋಗ ಶಾಲೆಯಾಗಿ ರೂಪಿತವಾಗಿದೆ. ಸೀತೆಗೆ ಅವಳ ಜೀವನದಲ್ಲಿ ನಡೆಯುವ ಪ್ರತಿಯೊಂದು ಘಟನೆಯೂ, ಸಣ್ಣ ಸಣ್ಣ ಅಂಶಗಳೂ ಮಹತ್ತರವಾದ ಮುಂದಾಗಬಹುದಾದ ಘಟನೆಯನ್ನು ಸೂಚಿಸುತ್ತಿರುತ್ತವೆ. ಇದರ ಅರಿವಿದ್ದ ಸೀತೆಯು ತನ್ನನ್ನು ತಾನು ಅಪ್ರಜ್ಞಾಪೂರ್ವಕವಾಗಿ ಶೋಧನೆಗೆ ಒಡ್ಡಿಕೊಳ್ಳುತ್ತಾಳೆ. ಪಂಚವಟಿಯ ಸೌಂದರ್ಯವನ್ನು ಸವಿಯುತ್ತಿರುವಾಗ ಸೀತೆಯ ಕಾಲು ಜಾರುತ್ತದೆ. ಆದರೆ ಈ ಕ್ರಿಯೆಯ ಬಗ್ಗೆ ಅವಳ ಮನಸ್ಸಿನಲ್ಲಿ ಏಳುವ ಭಾವನೆಗಳನ್ನು ಈ ಪದ್ಯ ಹಿಡಿದಿಡುತ್ತದೆ

*'ಏನ್ ಮಂಗಳವೊ? ಕಾಲ್ ಜಾರುತಿದೆ*
*ನನಗೆ ! ಮೈಥಿಲಿ ತನ್ನೊಳಗೆ ತಾನು ಗೊಣಗುತಿರೆ,*
*ಒಳಗೆ ಬಾರದೆ ದೂರ ಸಾರದೆ ಕುರುಂಗಶಿಶು*
*ಸುಳಿದಡಗಿದುದು ಕಂಡಳೆಂದಲ್ ಮನಃ ಪ್ರಿಯಗೆ;*
ಈ ತಾಣಮೆಲೆವನೆಗೆ ನಲ್ದಾಣವೇ ದಿಟಂ!...."[8]

ಯಾವುದರ ಬಗ್ಗೆ ಆಸೆಯಾಗಲೀ, ಮೋಹವಾಗಲೀ ಇರದ ಸೀತೆಯು ಮುಂದೆ ಮಾಯಾಮೃಗದ ಮೋಹದ ಬಲೆಯಲ್ಲಿ ಸಿಕ್ಕಿಬೀಳುವ ಸೂಚನೆ ಈ ಸ್ವಗತ ಪದ್ಯದಲ್ಲಿದೆ. ತನ್ನ ಅಪಾಯವನ್ನು ತಾನೇ ಆಹ್ವಾನಿಸಿಕೊಳ್ಳುತ್ತಾಳೆ. "ಆದರೆ ಸಾಮಾನ್ಯರ ಜಾರಿಕೆ ಅವನತಿಯ ಪ್ರಥಮ ಹಂತವಾದರೆ, ಸೀತೆಯ ಜಾರಿಗೆ ಏರಿಕೆಯ ಸೋಪಾನವಾಗುತ್ತದೆ. ಇಲ್ಲಿ ಪತನಕ್ಕೆ ಕಾರಣವಾಗಬಹುದಾದ ವ್ಯಕ್ತಿಯ ದೌರ್ಬಲ್ಯ ಉದ್ಧಾರದ ಹೇತುವಾಗುತ್ತದೆ"[9] ಎಂದು ಡಾ॥ ಹೆಚ್.ಜೆ.ಲಕ್ಕಪ್ಪಗೌಡರು ಹೇಳುತ್ತಾರೆ. ರಾಮ ಮಾಯಾ ಜಿಂಕೆಯ ಬೆನ್ನಟ್ಟುತ್ತಾನೆ. ಆದರೆ ಅದನ್ನು ಕೊಂದಾಗ ಹೊರಡುವುದು ಮರೀಚನ ಆರ್ತಧ್ವನಿ, ಆಧ್ವನಿಯನ್ನು ರಾಮನದೆಂದು ಭಾವಿಸಿ ಅವನಿಗೆ ವಿಪತ್ತು ಉಂಟಾಗಿರಬಹುದು ಎಂದು ತಿಳಿದು ತನ್ನೊಡನಿದ್ದ ಲಕ್ಷ್ಮಣನಿಗೆ ರಾಮನ ಸಹಾಯಕ್ಕೆ ಹೋಗೆನ್ನುತ್ತಾಳೆ. ಸೀತೆಯ ರಕ್ಷಣೆಯ ಜವಾಬ್ದಾರಿಯನ್ನು ಹೊತ್ತಿದ್ದ ಲಕ್ಷ್ಮಣ ಸೀತೆಯನ್ನು ಬಿಟ್ಟು ಹೋಗಲು ಹಿಂಜರಿಯುತ್ತಾನೆ. ಆ ಸಂದರ್ಭದಲ್ಲಿ ಸೀತೆ ಈ ಮಾತುಗಳನ್ನು ಆಡುತ್ತಾಳೆ.

*"ಎಳೆಯ ಮುಳ್ ಚುಚ್ಚಲ್ಕೆ ನೋವಲ್ತುಮವೆ ಮೆಚ್ಚು*
*ಬೆಳೆದರಾಮುಳ್, ಅದರ ಕಚ್ಚು ಮುತ್ತಹುದೆ ಪೇಳ್*
*ಎಳೆಯ ಕರು ಬೆಳೆದ ಮೇಲದರ ತಾಯನೆ ಬೆದೆಗೆ*
*ಬಯಸಿದಪುದಯ್ಯೋ!"* [10]

ಈ ಮಾತುಗಳು ಸೀತೆಯು ಅಸಮಾನ್ಯ ಹೆಣ್ಣಾದರೂ ಸಾಮಾನ್ಯ ಹೆಣ್ಣುಗಳು ಮಾತಾಡುವಂತೆ ಲಕ್ಷ್ಮಣನನ್ನು ಚುಚ್ಚುತ್ತವೆ. ಈ ಮೂಲಕ ತಾನಾಗಿಯೇ ಸಂಕಟಗಳನ್ನು ಆಹ್ವಾನಿಸಿಕೊಳ್ಳುತ್ತಾಳೆ. ಲಕ್ಷ್ಮಣನು ಸೀತೆಯ ನುಡಿಗಳನ್ನು ಕೇಳಿದ ನಂತರ ರಾಮನನ್ನು ಅರಸುತ್ತಾ ಹೊರಡುತ್ತಾನೆ. ಇತ್ತ ಸೀತೆ ರಾಮ ಲಕ್ಷ್ಮಣರ ನಿರೀಕ್ಷೆಯಲ್ಲಿರುವಾಗ ಬಂದಿದ್ದು ಮಾಯಾವಿ ರಾವಣ. ರಾವಣನ ಕಪಟವನ್ನು ಅರಿತ ಸೀತೆ ಅವನೊಡನೆ ಮಾತಿಗಿಳಿಯುತ್ತಾಳೆ. ವಾಲ್ಮೀಕಿ ರಾಮಾಯಣದ ಸೀತೆ ಮಿತಭಾಷಿ. ಆದರೆ ಕುವೆಂಪುರವರ ರಾಮಾಯಣದ ಸೀತೆ ರಾಮಲಕ್ಷ್ಮಣ ಬರುವವರೆಗೂ ಮಾತಿನ ಚತುರತೆಯಿಂದ ಕಾಲಹರಣ ಮಾಡುತ್ತಿರುತ್ತಾಳೆ. ಇದನ್ನರಿತ ರಾವಣ ಹೆದರಿಕೆಯಿಂದ ಬಳ್ಳಿಯನ್ನಪ್ಪಿಕೊಂಡಿದ್ದ ಸೀತೆಯನ್ನು ಬಲವಂತವಾಗಿ ಎಳೆದೊಯ್ಯುತ್ತಾನೆ. ಆಗ ಸೀತೆ ಕಣ್ಣಿಗೆ ಕತ್ತಲು ಕವಿದಂತಾಗುತ್ತದೆ. ಆಕೆ ಒಡನೆ

ಕರೆದದ್ದು "ಓ ಲಕ್ಷ್ಮಣಾ ಓ ಲಕ್ಷ್ಮಣಾ" ಎಂದು. ಸೀತೆ ರಾಮನನ್ನು ಕರೆಯಬಹುದಿತ್ತು. ಆದರೆ ಆಕೆ ಕರೆದದ್ದು ಲಕ್ಷ್ಮಣನನ್ನು. ಲಕ್ಷ್ಮಣನನ್ನು ಅನುಮಾನ ದೃಷ್ಟಿಯಿಂದ ಕಂಡಿದ್ದ ಸೀತೆಗೆ ತನ್ನ ತಪ್ಪಿನ ಅರಿವಾಗಿ ಅವನನ್ನೇ ತನ್ನ ಸಹಾಯಕ್ಕಾಗಿ ಕರೆಯುತ್ತಾಳೆ.

ಪಂಚವಟಿಯಿಂದ ಅಪಹೃತಳಾದ ಸೀತೆಯನ್ನು ಮತ್ತೆ ನಾವು ಕಾಣುವುದು ಗಡಿಯಾಚೆಯ ಲಂಕೇಶನ ರಾಜ್ಯದಲ್ಲಿ. ಸೀತೆಯ ಹೊಸ ಅಧ್ಯಾಯ ಆರಂಭವಾಗುವುದು ಇಲ್ಲಿಂದಲೇ. ಸೀತೆಯು ತಪಸ್ವಿನಿಯಾಗಿ ಸ್ವ-ಆತ್ಮೋದ್ಧಾರದ ಕಡೆಗೆ ಚಲಿಸುತ್ತಾಳೆ. ಜೊತೆಗೆ ರಾವಣ, ಮಂಡೋದರಿ, ಧ್ಯಾನಮಾಲಿನಿ, ಚಂದ್ರಸಖಿ, ತ್ರಿಜಟೆ ಮುಂತಾದ ಅಸುರಸ್ತ್ರೀಯರ ಆತ್ಮವನ್ನು ಉದ್ಧರಿಸುತ್ತಾಳೆ. ಇವರೆಲ್ಲಾ ತಮ್ಮ ಅಸುರೀತನವನ್ನು ಕಳೆದುಕೊಂಡು ಹೊಸ ವಿವೇಚನೆಯತ್ತ ಸಾಗುತ್ತಾರೆ.

ಲಂಕೆಯ ಗುಪ್ತ ಗೃಹದಲ್ಲಿದ್ದ ಸೀತೆಯು ಸ್ವಪ್ನಾವಸ್ಥೆಯಿಂದ ಜಾಗ್ರತಾವಸ್ಥೆಗೆ ಬಂದಾಗ ಚಂದ್ರಸಖಿಯು ಏರ್ಪಡಿಸಿದ್ದ ವೈಭವಕ್ಕೆ ಎದಿರ್ಗೊಳ್ಳುತ್ತಾಳೆ. ಆದರೆ ಸೀತೆಗೆ ಇದಾವುದೂ ಬೇಕಿರಲಿಲ್ಲ. ಮೀಯದೆ, ಉಣ್ಣದೆ ಹಾಗೆಯೇ ಕಾಲಕಳೆಯುತ್ತಾಳೆ. ಸೀತೆಯ ಈ ಪ್ರೀತಿಯನ್ನರಿತ ರಾವಣ ಅವಳನ್ನು ಅಶೋಕವನದ ಎಲೆಮನೆಗೆ ಕಳುಹಿಸುತ್ತಾನೆ. ಪ್ರಕೃತಿಯ ಮಗಳಾದ ಸೀತೆ ಗೃಹಬಂಧನದಿಂದ ಮುಕ್ತಿಹೊಂದಿ ಪ್ರಕೃತಿಯ ಮಡಿಲಿಗೆ ಬಂದದ್ದು ಮನಸ್ಸಿಗೆ ಶಾಂತಿಯನ್ನು ತರುತ್ತದೆ. ಪ್ರಕೃತಿಯನ್ನು ಕಂಡಾಗ ಅವಳಿಗೆ ಅಪರಿಚಿತನಾಡಲ್ಲಿ ಪರಿಚಿತರನ್ನು ಕಂಡಾಗ ಆಗುವ ಸಂತೋಷವನ್ನು ಅನುಭವಿಸುತ್ತಾಳೆ. ರಾಮನ ಆಗಮನಕ್ಕಾಗಿ ಹಾಗೂ ರಾವಣನ ಉದ್ಧಾರಕ್ಕಾಗಿ ತಪಸ್ಸನ್ನಾಚರಿಸುತ್ತಾಳೆ. ರಾವಣನ ಮೇಲಿನ ವೈರ ಬದಲಾಗಿ ಅವನ ಮೇಲೆ ಕರುಣೆ ಮೂಡುತ್ತದೆ.

ರಾವಣನು ಸೀತೆಯನ್ನು ಅಪಹರಣ ಮಾಡಿದುದರಿಂದ ಬಾಹ್ಯಲೋಕಕ್ಕೆ ಗೋಚರಿಸುವುದು ರಾವಣನ ಅವನತಿ. ಆದರೆ ನಿಜವಾಗಿ ರಾವಣನ ಆತ್ಮ ಉದ್ಧಾರದೆಡೆಗೆ ಸಾಗುವುದು ಇಲ್ಲಿಂದಲೇ. ಅಶೋಕವನದಲ್ಲಿದ್ದ ಸೀತೆಯನ್ನು ನೋಡಲು ಬಂದ ರಾವಣ ಈ ಮಾತುಗಳನ್ನು ಹೇಳುತ್ತಾನೆ. ನಿನ್ನ ಒಲುಮೆಯನ್ನು ಗಳಿಸುವುದಕ್ಕಾಗಿ ನನ್ನ ಕಾತರತೆಗೆ, ತಾಳ್ಮೆಗೆ ಕಡಿವಾಣ ಹಾಕಿದ್ದೇನೆ. ನಿನ್ನ ಪ್ರೇಮದ ವರಕ್ಕಾಗಿ ನಾನು ತಪಸ್ವಿಯಾಗಿದ್ದೇನೆ ಎಂದು ಹೇಳುತ್ತಾನೆ. ಅದಕ್ಕೆ ಪ್ರತಿಯಾಗಿ ಸೀತೆ ಹೇಳುವ ಮಾತುಗಳಿವು.

*"ಬದಿಯ ಬೇಳ್ವೆಗೆ ಬಂದ ಪಶು ನೀಂ, ದಶಗ್ರೀವ*
*ಮರುಗುವೆನು ನಿನಗೆ. ತಾಯ್ ಕೇಡಾಡಿ ಕಂದಂಗೆ*
*ಮರುಗುವೋಲ್, ನನ್ನ ಕಲ್ಲೆರ್ದೆ ಕತಗುತಿದೊ ನಿನಗೆ*
*ಮೆಲ್ಲಿತಪ್ಪುದು ದೀನಂ! ನೀನೆಂದ ಮೊಳ್ನೆಯಿಂ*
*ಸಾಧನೆಗಸಾಧ್ಯಮಿಲ್ಲೆಂಬರ್ಕೈ" ॥*

ಹೀಗೆ ಸೀತೆ ತನ್ನಲ್ಲಿ ರಾವಣನ ಬಗ್ಗೆ ಒಲವು ಮೂಡುವ ಬದಲು ಮರುಕ ಮೂಡಿರುವುದನ್ನು ತಿಳಿಸುತ್ತಾಳೆ. ಇದು ರಾವಣನನ್ನು ಆತ್ಮಶೋಧಕ್ಕೆ ಒಡ್ಡುತ್ತದೆ. ಸೀತೆಯ ಮಾತುಗಳನ್ನು ಕೇಳಿ ರಾವಣ ಮೌನದಿಂದ ಹೊರಟುಹೋಗುತ್ತಾನೆ. ಈ ಮೌನವು ಅವನ ಮನಸ್ಸಿನಲ್ಲಿ ಉಂಟಾಗುತ್ತಿರುವ ಘರ್ಷಣೆಯನ್ನು ಸೂಚಿಸುತ್ತದೆ.

ಮಂಡೋದರಿಯೂ ಸೀತೆಯಷ್ಟೇ ತಪಶ್ಶಕ್ತಿಯನ್ನು ಉಳ್ಳವಳು. ಇವರಿಬ್ಬರ ಭೇಟಿಯು ಒಂದು ಅಪೂರ್ವ ಸಂಗಮದಂತಿದೆ. ಹಾಗೂ ಇಬ್ಬರ ಮಹಾಸತಿಯರ ಸಮಾಗಮದ ದೃಶ್ಯ ಮಹತ್ತರ ತಿರುವನ್ನು ಪಡೆಯುತ್ತದೆ. ಸೀತೆ ಮಂಡೋದರಿಯನ್ನು ಭೇಟಿ ಮಾಡುವ ಮೊದಲು ಲಂಕೆಯಿಂದ ಮುಕ್ತಿ ಪಡೆಯುವುದಷ್ಟೇ ಆಕೆಯ ತಪಸ್ಸಿನ ಗುರಿಯಾಗಿತ್ತು. ಆದರೆ ಮಂಡೋದರಿಯ ಭೇಟಿಯ ನಂತರ ಅವಳ ಪತಿಮೋಕ್ಷದ ಉದ್ದೇಶವೂ ಆ ತಪಸ್ಸಿಗೆ ಕಾರಣವಾಗಿ ಸೇರುತ್ತದೆ. "ರಾಮ ಸೀತೆಯರ ದಿವ್ಯ ವ್ಯಕ್ತಿತ್ವವೆಂಬ ಸ್ಪರ್ಶ ಮಣಿಯ ಸೋಂಕಿಗೆ ಲೌಹ ಪಾತ್ರಗಳು ಸ್ವರ್ಣಪಾತ್ರಗಳಾಗಿವೆಯೆಂದೇನೂ ಅಲ್ಲ. ಆದರ್ಶಮಯ ದಿವ್ಯ ವ್ಯಕ್ತಿತ್ವಗಳ ಮಾರ್ಗದರ್ಶನ ಅನುಗ್ರಹಗಳೂ, ಸ್ವಸಾಧನೆಗಳೂ, ಸ್ವ ಸಾಧನೆ ಸ್ವಾನುಭವ, ಸ್ವಶಕ್ತಿಗಳೂ ಸೇರಿಯೇ ಪ್ರತಿಪಾತ್ರವೂ ಸ್ವರೂಪವನ್ನು ಕಂಡುಕೊಳ್ಳುವುದು ಸಾಧ್ಯವಾಗಿದೆ"[12] ಎಂದು ಪ್ರೊ॥ ಜಿ.ಎಸ್.ಸಿದ್ಧಲಿಂಗಯ್ಯನವರು ಅಭಿಪ್ರಾಯ ಪಡುತ್ತಾರೆ.

ಪಾತಿವ್ರತ್ಯವನ್ನು ಕಟ್ಟುವ ಹಾಗೂ ಕಾಪಾಡುವ ಶಕ್ತಿಯಾಗಿ ಸೀತೆಯನ್ನು ಈ ಮಹಾಕಾವ್ಯದಲ್ಲಿ ಕಾಣುತ್ತೇವೆ. ಪಾತೀವ್ರತ್ಯವೆಂದರೆ ವ್ಯಂಗದ ಹಾಗೆ ಮಾತನಾಡುತ್ತಿದ್ದ ರಾವಣನಿಗೆ ಸೀತೆಯ ವ್ಯಕ್ತಿತ್ವದಿಂದ ಪಾತಿವ್ರತ್ಯದ ನಿಜವಾದ ಅರಿವಾಗುತ್ತದೆ. ಮಹಾಸತಿ ಮಂಡೋದರಿಯಂತ ಪತ್ನಿಯಿದ್ದು ಅದನ್ನು ಅರಿಯದ ಕತ್ತಲೆಯಲ್ಲಿ ಅವನಿದ್ದನು. ಎಲ್ಲ ಹೆಣ್ಣುಗಳನ್ನು ಹೊತ್ತು ತರುತ್ತಿದ್ದನು. ಇನ್ನು ಕೆಲವು ಸ್ತ್ರೀಯರು ಇವನಿಗೆ ಒಲಿದು ಬರುತ್ತಿದ್ದರು. ಇದರಿಂದ ಸ್ತ್ರೀಯರೆಂದರೆ ಅಧಿಕಾರ, ಸಂಪತ್ತು, ಸೌಂದರ್ಯ ಇವುಗಳಿಗೆ ಮಾತ್ರ ಬೆಲೆ ಕೊಡುವವರೆಂದು ತಿಳಿದಿದ್ದ ರಾವಣನಿಗೆ ಸೀತೆಯಂಥ ಸ್ತ್ರೀಗೆ ಆತ್ಮ ಸೌಂದರ್ಯ ಮುಖ್ಯ ಎಂಬುದನ್ನು ಮನಗಾಣುತ್ತಾನೆ. ಪಾತಿವ್ರತ್ಯ ಕಲ್ಪನೆಯ ಬಗ್ಗೆ ಗೌರವ ಭಾವಗಳು ರಾವಣನಲ್ಲಿ ಬೆಳೆಯುವಂತೆ ಸೀತೆ ಮಾಡುತ್ತಾಳೆ.

ರಾವಣ ತನ್ನ ಪತ್ನಿ ಮಂಡೋದರಿಯನ್ನು ತನ್ನ ಅನುಮತಿಯನ್ನು ಪಡೆಯದೆ ಭೇಟಿಯಾಗಬಾರದೆಂದು ತಿಳಿಸಿದ್ದನು. ಸೀತೆಯ ಪ್ರಭಾವ ತನ್ನ ಪತ್ನಿಗೆಲ್ಲಿ ಆಗುವುದೋ ಎಂಬ ಆತಂಕ ಅವನನ್ನು ಹಾಗೆ ಪ್ರೇರೇಪಿಸಿತ್ತು. ಮಂಡೋದರಿಯು ಪತಿಯ ಮಾತಿಗೆ ಬದ್ಧಳಾಗಿ ಸೀತೆಯನ್ನು ನೋಡದೆ ಇರಲಾಗಲಿಲ್ಲ. ಏಳು ಇರುಳು ದೂರದಲ್ಲಿ ನಿಂತು ಮಾತನಾಡಿಸದೆ ಹೋಗುತ್ತಿದ್ದಳು. ಇದನ್ನು ಕಂಡ ಸೀತೆ ಕೊನೆಯ ದಿನ ತಾನಾಗಿಯೇ ಮಂಡೋದರಿಯ ಬಳಿ ಬರುತ್ತಾಳೆ. ಮಂಡೋದರಿ ಎಂದು ಸೀತೆಗೆ ತಿಳಿದ ತಕ್ಷಣ ಅವಳ ಬಗ್ಗೆ ಪೂಜ್ಯ ಭಾವನೆ ಮೂಡುತ್ತದೆ. ಸೀತೆ ಆಡುವ ಮಾತುಗಳು ಸೀತೆಯ ಹಿರಿತನವನ್ನು ನಮಗೆ ಧ್ವನಿಸುತ್ತದೆ.

*"ಮುನ್ ಕೇಳ್ದನಾಂ ನಿನ್ನ ಬೆಳ್ಪಸವ ನೆಲೆ ಪೂಜ್ಯೆ;*
*ಕಂಡಿಂದು ಧನ್ಯಯನ್, ಪಿರಿಯಳ್ಗೆ ನಮಿಸುವೆನ್"*
*'ನಾನಸುರಿ ನಮಿಸದಿರೆನಗೆ ಆರ್ಯೆ!*
*"ನೀನಸುರಿ?*
*ನೀನಸುರಯಲ್ತು ; ದೇವತೆ ಪತಿವ್ರತೆಯಾಗಿ*
*ನಮಗೆಲ್ಲಮಾದರ್ಶಮಾತೆ ನಿನಗಾಂ ನಮಿಸೆ*
*ಶ್ರೀಪ್ರದಿಂದೆನಗೆ ಮಂಗಳ ಮಪ್ಪುದೆಂದುನಾಂಬಲ್ಲೆನ್ .. .. ..*[13]

ಹೀಗೆ ಸೀತೆ ಮಂಡೊದರಿಯನ್ನು ಬಹಳ ಗೌರವದಿಂದ ಕಂಡು ಅವಳು ತನಗೆ "ಆದರ್ಶಮಾತೆ' ಎಂದು ಹೇಳುತ್ತಾಳೆ. ತಾನೇ ಮಹಾಶಕ್ತಿಯಾದ ಸೀತೆ ಮಂಡೋದರಿಯಲ್ಲಿನ ಸತೀತನವನ್ನು ಗುರುತಿಸಿ ಗೌರವಿಸುವುದು ಸೀತೆಯ ಸರಳತೆ, ಸೂಕ್ಷ್ಮತೆಯನ್ನು ತೋರುತ್ತದೆ. ಸೀತೆಯನ್ನು ಭೇಟಿಯಾದ ಬಳಿಕ ಮಂಡೋದರಿಯ ತಪಸ್ಸೂ ಮತ್ತಷ್ಟು ತೀವ್ರ ಸ್ವರೂಪವನ್ನು ಪಡೆಯುತ್ತದೆ. ಮಂಡೋದರಿಯ ಭೇಟಿಯ ನಂತರ ಸೀತೆಯೂ ರಾವಣನ ಪಾಪ ಬುದ್ಧಿ ಹಾಗೂ ರಾವಣತ್ವವನ್ನು ಕಳೆದು ಪುಣ್ಯಮುಖಿಯನ್ನಾಗಿ ಮಾಡಬೇಕೆಂಬ ಮಹಾನ್ ಉದ್ದೇಶವನ್ನು ತನ್ನ ಮನದಲ್ಲಿ ಸ್ಥಾಪಿಸಿಕೊಳ್ಳುತ್ತಾಳೆ. ಒಬ್ಬ ಶತ್ರುವನ್ನು ಸಂಹಾರ ಮಾಡಿ ಅವನನ್ನು ಇಲ್ಲದಂತೆ ಮಾಡುವುದು ಮಹತ್ಕಾರ್ಯವೆನಿಸುವುದಿಲ್ಲ. ಒಬ್ಬ ದುಷ್ಟ ಶತ್ರುವಿಗೆ ಮಾನಸಿಕವಾಗಿ ಪರಿವರ್ತನೆಯನ್ನು ಮಾಡುವುದು ಒಂದು ಸಾಧನೆಯಾಗುತ್ತದೆ.

ಸೀತೆಯನ್ನು ಹನುಮಂತನು ಮೊದಲು ಕಂಡಾಗ ಅವನು ಹೇಳುವ ಮಾತುಗಳು ತಪವನ್ನಾಚರಿಸುತ್ತಿದ್ದ ಸೀತೆಯ ಸ್ವರೂಪವನ್ನು ತಿಳಿಸುತ್ತದೆ.

*"ಅಯ್ಯೋ ದಾಶರಥೀ*
*ಬಣ್ಣಿಸಿದ ತನ್ನ ದಯಿತೆಯ ಚಿತ್ರವಲ್ಲಿ ಈ*
*ದೀನದುಃಖಿನಿಯೆಲ್ಲಿ? ಬರ್ಚಿಸಿದ ಚೆಲ್ದೆಸೆವ*
*ಚಿತ್ರಪಟಮಂ ಮಸಿಯ ಕೈ ಹಿಸುಗಿ ಬಿಸುವಂತೆ*
*ತೋರ್ಪಳೀ ಮಹಿಳೆ! ವಿಧಿಯ ನಿಷ್ಠುರ ಹೃದಯದುಂ*
*ಸುಡು, ಸುಡು ದಯಾಶೂನ್ಯಮಂ!"* [14]

ಸೀತೆ ಎಂದರೆ ಹೀಗಿರುತ್ತಾಳೆಂಬ ಕಲ್ಪನೆಯನ್ನಿಟ್ಟುಕೊಂಡು ಬಂದಿದ್ದ ಹನುಮಂತನಿಗೆ ತಪಸ್ವಿನಿ ಸೀತೆಯನ್ನು ಕಂಡೊಡನೆ ಪೂರ್ವಕಲ್ಪನೆಯನ್ನು ಕಳೆದುಕೊಂಡು ಆಕೆಯ ಬಗ್ಗೆ ಭಕ್ತಿ ಇನ್ನಷ್ಟು ಇಮ್ಮಡಿಗೊಳ್ಳುತ್ತದೆ. ರಾಮನಿಂದ ದೂರವಿದ್ದರೂ ಅವಳ ಮನವೆಲ್ಲ ನೆಟ್ಟಿರುವುದು ಅವನಲ್ಲಿಯೇ. ರಾಮಭಕ್ತ ಹನುಮಂತನನ್ನು ಕಂಡಾಗ ಸ್ತ್ರೀಸಹಜ ಗುಣವೆಂಬಂತೆ ರಾಮನ ಬಗ್ಗೆ ಬಹಳವಾಗಿ ವಿಚಾರಿಸುತ್ತಾಳೆ. ರಾಮ ಹೇಗಿರುವನು? ಎಲ್ಲಿರುವನು? ವಿವಾಹದಿಂದ ಸವೆದಿರುವನೆ? ನನ್ನನ್ನು ನೆನೆಯುವನೆ? ಈ ನಿರ್ಭಾಗ್ಯೆಯನ್ನು? ಎಂದು ತೀವ್ರ ತುಡಿತವನ್ನು ವ್ಯಕ್ತಪಡಿಸುತ್ತಾಳೆ. ಈ ರೀತಿಯ ಮಾತುಗಳಿಂದ ಸೀತೆ ಪುರುಷ ಸಂವೇದನೆ ಹಾಗೂ ಪತಿಭಕ್ತಿಯುಳ್ಳವಳಾಗಿ ಹತ್ತಿರಳಾಗುತ್ತಾಳೆ. ಸೀತೆಯು ರಾಮನಿಂದ ದೂರವಾಗಿರುವುದರಿಂದ ಆತನನ್ನು ಇನ್ನಷ್ಟು ಅರ್ಥಮಾಡಿಕೊಂಡು, ಪ್ರೀತಿಯಿಂದ ಆರಾಧಿಸಲು ಸಾಧ್ಯವಾಗುತ್ತದೆ. ಹಾಗೂ ಹನುಮಂತನು ಕೊಡುವ ಉತ್ತರ ಒಂದೇ ಮಾತಿನಲ್ಲಿ ಅವರಿಬ್ಬರ ಪ್ರೇಮವನ್ನು ಅನಾವರಣಗೊಳಿಸುತ್ತದೆ, ಸೀತೆಯು ರಾವಣನ ಬಂಧಿಯಲ್ಲಿ ತಪಸ್ವಿಯಾದರೆ, ರಾಮ ಸೀತೆಯ ನೆನಪಿನ ಬಂಧಿಯಲ್ಲಿ ತಪಸ್ವಿಯಾಗಿದ್ದಾನೆ.

ಸೀತೆಯ ತಪಸ್ಸು ರಾಮನನ್ನಷ್ಟೇ ಅಲ್ಲ, ಅವನ ಸೈನ್ಯವನ್ನು ಕಾಯುತ್ತದೆ. ಸೀತಾವ್ರತದಿಂದ ರಾಮಸೈನ್ಯ ಸರ್ವ ವಿಧಗಳಿಂದಲೂ ರಕ್ಷಾಕವಚಗಳಿಂದ ಕೂಡಿದೆ. ರಾಮಸೈನ್ಯ ಬಲಕ್ಕೆ ಸೀತೆಯ ತಪಶ್ಶಕ್ತಿಯು ಇನ್ನಷ್ಟು ಬಲವನ್ನು ಕೊಟ್ಟಿದೆ. ಹಾಗೂ ಸೋಲದೆ ಮುನ್ನಡೆದಿದೆ ಎಂಬುದನ್ನು ರಾವಣನ ಸೈನ್ಯದಲ್ಲಿದ್ದ ಶಾರ್ದೂಲನು ತಿಳಿಸುತ್ತಾನೆ. ಇದರಿಂದ ಸೀತೆಯ ತಪಸ್ಸು ಅಸಾಧಾರಣ ಶಕ್ತಿಯುಳ್ಳದ್ದೆಂದು ತಿಳಿಯುತ್ತದೆ.

ಸೀತೆಯ ಸಾತ್ವಿಕ ಗುಣದಿಂದ ಹಾಗೂ ಅವಳ ಸಾನಿಧ್ಯದಿಂದ ರಾಕ್ಷಸ ಸ್ತ್ರೀಯಾದ ತ್ರಿಜಟೆಯೂ ಪರಿವರ್ತಿತಳಾಗುತ್ತಾಳೆ. ಸೀತೆಯ ಸೇವೆಯನ್ನು ಮಾಡುತ್ತಿರುವುದು ಕೇವಲ ದಾಸ್ಯವಾಗುವುದಿಲ್ಲ. ಸೀತೆಯ ಸಾನ್ನಿಧ್ಯದಲ್ಲಿದ್ದು ಹಗಲಿರುಳು ಸೇವೆಮಾಡುತ್ತಿರುವುದು ನನ್ನ ಪೂರ್ವ ಜನ್ಮದ ಪುಣ್ಯದ ಫಲ ಎಂದು ತ್ರಿಜಟೆ ನುಡಿಯುತ್ತಾಳೆ. ಅಷ್ಟೇ ಅಲ್ಲದೆ ತಪಸ್ವಿಯ ಸೇವೆಯೂ ಕೂಡ ತಪಸ್ಸಿಗೆ ಸಮನಲ್ಲವೆ ಎಂದು ತ್ರಿಜಟೆ ಹೇಳುತ್ತಿರುವ ಮಾತುಗಳು ತ್ರಿಜಟೆಯ ಬೌದ್ಧಿಕ ಸ್ತರದಲ್ಲಾದ ಬದಲಾವಣೆಯ ಸಂಕೇತವನ್ನು ಸೂಚಿಸುತ್ತದೆ. ಲಂಕೆಯ ಸೈನ್ಯದಲ್ಲಿ ತ್ರಿಜಟೆಯ ಗಂಡನೂ ಭಾಗಿಯಾಗಿರುತ್ತಾನೆ. ರಾಮ ಸೈನ್ಯದಿಂದ ಒದಗಬಹುದಾದ ಆಪತ್ತಿನಿಂದ ಸೀತೆಯು ತ್ರಿಜಟೆಯ ಮಾಂಗಲ್ಯಕ್ಕೆ ತನ್ನ ಪ್ರಾಣವನ್ನೇ ಪಣವಾಗಿಡುತ್ತಾಳೆ. ಒಬ್ಬ ಸೇವಕಿಗೆ ಈ ರೀತಿಯಲ್ಲಿ ಮಹತ್ವದ ಸ್ಥಾನ ಕೊಟ್ಟಿರುವುದು ಸೀತೆಯ ವಿಶಾಲ ಮನಸ್ಸಿನ ದ್ಯೋತಕವಾಗಿದೆ. ಸೀತೆಯು ಯುದ್ಧ ವಿರೋಧಿಯಾದ ಮಾತುಗಳನ್ನು ಆಡುತ್ತಾಳೆ. ಯುದ್ಧವು ಮನುಷ್ಯನನ್ನು ಅವನತಿಯತ್ತ ಕೊಂಡೊಯ್ಯುತ್ತದೆ. ಅಲ್ಲಿ ಸಾವು ನೋವುಗಳ ಹೊರತು ಏನೂ ಇಲ್ಲ. ಆಧುನಿಕ ಕವಿಯಾದ ಕುವೆಂಪು ತಮ್ಮ ವರ್ತಮಾನದ ನೈಜ ಘಟನೆಗಳಿಂದ ಬೇಸತ್ತು ಯುದ್ಧವು ಮನುಕುಲದ ನಾಶ ಎಂದೇ ತಿಳಿದಿದ್ದಾರೆ. ಅವರ ಈ ನಿಲುವನ್ನು ಸೀತೆಯ ಪಾತ್ರದ ಮೂಲಕ ವ್ಯಕ್ತಪಡಿಸುತ್ತಾರೆ. ತ್ರಿಜಟೆಗೆ ಉತ್ತರಿಸುತ್ತಾ:

*" ನನ್ನದೆಸೆಗಾಗಿ ಅದೆನಿತೊ ಲಂಕೆಯ ಪೆಣ್ಗಳೆನಿತೊ ಕಿಷ್ಕಿಂದೆಯರ್*
*ತಮ್ಮ ಮಂಗಳ ಸೂತ್ರಭಂಗಮಂ ಕಾಣುವರೊ*
*ಮೇಣ್ ಸಖೀ ಇದು ಬರಿ ಅಹಂಕಾರ ಸಂಭವವೊ ನಿನಗು ಎನಗುಂ"*[15]

ಎನ್ನುತ್ತಾಳೆ. ಕುವೆಂಪು ಅವರು ತಮ್ಮ 'ಸ್ಮಶಾನ ಕುರುಕ್ಷೇತ್ರಂ' ನಾಟಕದಲ್ಲಿ ವ್ಯಾಖ್ಯಾನಿಸಿರುವಂತೆ ಯುದ್ಧ ಎಂದರೆ "ದುರಂತತೆ, ಅನ್ಯಾಯ, ಕ್ರೌರ್ಯ, ವಿನಾಶ, ಅವಿವೇಕ ದುರ್ಲಂಘ್ಯ, ವಿಧಿ, ಸರ್ವ ವಿಫಲತೆ, ಸಂಸ್ಕೃತಿಗಳ ಸಾವು"[16] ಹೀಗೆ ಯುದ್ಧದ ಬಗ್ಗೆ ಇರುವ ಕುವೆಂಪುರವರ ನಿಲುವುಗಳು ಸೀತೆಯ ಮಾತುಗಳಲ್ಲಿ ಧ್ವನಿಸುತ್ತವೆ.

ಸೀತೆಯ ಮೂಲಕ ವಿಕಸನಕ್ಕೆ ಒಡ್ಡಿಕೊಂಡ ಮತ್ತೊಬ್ಬಳು ಅಪ್ಸರೆ ಧ್ಯಾನಮಾಲಿನಿ. ಈಕೆ ಒಂದು ದುರ್ಬಲ ಪರಿಸ್ಥಿತಿಯಲ್ಲಿ ರಾವಣನ ಕ್ಷಣಿಕ ವ್ಯಾಮೋಹಕ್ಕೆ ಒಳಗಾಗಿ ಅವನನ್ನು ಪ್ರೀತಿಸಿದ ಹೆಣ್ಣು. ಅವನಿಂದ ಅತಿಕಾಯ ಎಂಬ ಶೂರನನ್ನು ಮಗನಾಗಿ ಪಡೆದಿರುತ್ತಾಳೆ. ಗಂಡನನ್ನು ಬಿಟ್ಟು ಬಂದು ರಾವಣನಿಗೆ ಒಲಿದ ನಂತರ ತಾನು ಮಾಡಿದ ಕೃತ್ಯ ಅಪರಾಧವೆಂದು ಧ್ಯಾನ ಮಾಲಿನಿಗೆ ಅರಿವಾಗುತ್ತದೆ. ಅಲ್ಲದೆ ಆತ್ಮಾವಲೋಕನಕ್ಕೆ ತೊಡಗುತ್ತಾಳೆ. ಇದು ಸೀತೆಯ ದರ್ಶನದ ನಂತರವೇ ಸಾಧ್ಯವಾದ ಹೊಸ ಹೆಜ್ಜೆಯಾಗಿದೆ. ಸೀತೆಯಂತ ಪ್ರಜ್ವಲ ತಪಸ್ವಿನಿಯನ್ನು ಕಂಡ ಬಳಿಕ ತನ್ನ ಕೃತ್ಯವನ್ನು ಅಳಿದುಕೊಳ್ಳುತ್ತಾಳೆ. ಮನಸ್ಸಿನಲ್ಲಿ ಮೈಥಿಲಿಯನ್ನು ಗುರುವಾಗಿ ಸ್ವೀಕರಿಸಿಕೊಳ್ಳುತ್ತಾಳೆ. ರಾವಣನನ್ನು ಬಿಟ್ಟು ಅವಳ ಮನಸ್ಸು ತನ್ನ ಗಂಡನ ಬಗ್ಗೆ ಚಿಂತಿಸುವ ಹಾಗೆ ಮಾಡುತ್ತದೆ. ಇದರಿಂದ ರಾವಣನಲ್ಲಿ ಹುಟ್ಟಿದ್ದು ಕ್ಷಣಿಕ ಮೋಹವೇ ಹೊರತು ಪ್ರೇಮವಲ್ಲ ಎಂದು ನೈಜ ಪ್ರೇಮದ ಸಾಕ್ಷಾತ್ಕಾರವನ್ನು ಮಾಡಿಕೊಳ್ಳಲು ಅವಳು ಕಾತರಿಸುತ್ತಾಳೆ. ಅವಳು ತನ್ನ ಅವಸಾನ ಸಮಯದಲ್ಲಿ ಆಡುವ ಕೆಲವು ಮಾತುಗಳು ಅವಳ ಮನಃ ಪರಿವರ್ತನೆಯನ್ನು

ತಿಳಿಸುತ್ತವೆ. ತನಗೆ ಯಾವುದೋ ಪ್ರಾರಬ್ಧಕರ್ಮದಿಂದ ಈ ಸ್ಥಿತಿ ಒದಗಿದೆ ಎಂದು ಹೇಳುತ್ತಾ, ಸೀತೆಯ ಪ್ರಭಾವದಿಂದ ವಿಕಾಸ ಹೊಂದಿ ತನ್ನ ಅವಸಾನ ಸಮಯದಲ್ಲಿ ಪತಿದರುಶನವನ್ನು ಮಾಡಿ ತನ್ನ ಪಾಪಗಳಿಂದ ಮುಕ್ತಿಹೊಂದಿರುವುದನ್ನು ತನ್ನ ಪತಿಯಲ್ಲಿ ನಿವೇದಿಸಿಕೊಳ್ಳುತ್ತಾಳೆ.

ಯಾರ ಮಾತುಗಳಿಂದ ಪ್ರೇರೇಪಿತನಾಗಿ ಸೀತಾಪಹರಣಕ್ಕೆ ಕಾರಣಳಾಗಿದ್ದಳೋ ಆ ಚಂದ್ರಸಖಿ ರಾವಣನ ತಂಗಿ. ಆದರೆ ಸೀತೆಯ ದೃಢ ತಪಶ್ಶಕ್ತಿಗೆ ಸೋತಿರುತ್ತಾಳೆ. ಸೀತೆಯ ಬಗ್ಗೆ ವಿಶೇಷವಾದ ಗೌರವ ಆಕೆಗೆ ಮೂಡುತ್ತದೆ. ರಾವಣ ಲಂಕೆಗೆ ಸೀತೆಯನ್ನು ಹೊತ್ತು ತಂದಾಗ ಅವಳು ಸೀತೆ ಕೇವಲ ಒಂದು ಹೆಣ್ಣಲ್ಲ ಆಕೆ ದೇವತೆ ಎಂದು ಹೇಳುತ್ತಾಳೆ.

*" ಸೀತೆ ಪೆಣ್ಣಲ್ತು*
*ನಮ್ಮನ್ನರೊಲ್, ದೈತ್ಯರಾಜೇಂದ್ರ, ದೇವಿಯಮ್"* [16]
*"ನಿನ್ನ ವೋಲೆ ನಗು ವೊಪಾಪ ಮೇ*
*ರುಚಿಯಾಯ್ತು. ಈ ಪೂಜ್ಯೆಯಿಂದರಿತೆ ಆರುಚಿ*
*ನರಕಮೆಂದು ಆ ಕೂಪಕನ್ನೆಂದು ಮಿಳಿಯೆನಮ್"* [17]

ಎಂದು ತನ್ನ ಸುಮಾರ್ಗದ ದೃಢತೆಯನ್ನು ಸ್ಪಷ್ಟಪಡಿಸುತ್ತಾಳೆ. ಸದಾ ತಪಸ್ಸನ್ನು ಆಚರಿಸುತ್ತಿದ್ದ ಸೀತೆಗೆ ತನ್ನ ಆತ್ಮಗೌರವವನ್ನು ಮಾತ್ರ ಕಾಪಾಡಿಕೊಳ್ಳುವ ಧ್ಯೇಯವೊಂದೇ ಆಗಿರಲಿಲ್ಲ. ಅವಳ ತಪಸ್ಸು ಶತ್ರುವನ್ನು ಮಿತ್ರರನ್ನಾಗಿಸುವ ಮಹಾಶಕ್ತಿಯಾಗಿತ್ತು.

ಸೀತಾಪಹರಣ ವಿಷಯದಲ್ಲಿ ರಾವಣನಿಗೆ ಅದು ಶಾಪವಾಗಿ ಅವನನ್ನೇ ಆರಿಸಿಕೊಳ್ಳುವಲ್ಲಿ ಸತೀತ್ವದ ಪ್ರಶ್ನೆ ಮತ್ತು ನೈತಿಕತೆಯ ಮಹತ್ವವನ್ನು ಮುಂದಿಡುತ್ತವೆ. ಸ್ತ್ರೀತ್ವದ ಕಲ್ಪನೆಯ ಬಗ್ಗೆ ಇದ್ದಂತಹ ದೋಷಗಳು ನಿವಾರಣೆಯಾಗಿ ಗೌರವ ಮೂಡುವಂತೆ ಸೀತೆಯ ಪಾತಿವೃತ್ಯ ವ್ರತದಿಂದ ಪ್ರೇರಣೆ ಪಡೆಯುತ್ತಾನೆ. ರಾವಣನನ್ನು ಕುರಿತು ಆಕೆಯ ಮನಸ್ಸು ಕರಗುತ್ತದೆ. ಮಾತೃ ಹೃದಯಿಯಂತೆ "ಮರುಗುವೆನ್ ನಿನಗೆ, ತಾಯ್ ಕೇಡಾಡಿ ಕಂದಂಗೆ ಮರುಗುವ ವೊಲ್" ಎನ್ನುತ್ತಾಳೆ. ಮುಂದುವರೆದು, ಕಾಲಾನಂತರದಲ್ಲಿ ನಿನ್ನ ಕಲ್ಲಿನ ಹೃದಯ ಕರಗಿ ಮೃದುವಾಗುತ್ತದೆ. 'ನೋಂತಿರ್ಪೆನವರತಮಾತ್ಮದುದ್ಧಾರಕ್ಕೆ ನಿನಗೆ' ಎಂಬ ಸೀತೆಯ ಆತ್ಮ ವಿಶ್ವಾಸದ ನುಡಿಗಳು ರಾವಣನ ಬಳಗವನ್ನು ಮಥಿಸುತ್ತವೆ"[19] ರಾವಣನಿಗೆ ಇದುವರೆಗೆ ತನ್ನ ಸೌಂದರ್ಯ, ಅಧಿಕಾರಕ್ಕೆ ಒಲಿಯದ ಹೆಣ್ಣು ಯಾರು ಇಲ್ಲವೆಂಬ ಅಹಂಕಾರವಿತ್ತು. ಆದರೆ ಸೀತೆಯ ವಿಷಯದಲ್ಲಿ ಅವನ ಅಹಃ, ದರ್ಪ ಎಲ್ಲವೂ ದೂರವಾಗಿ ಅವನ ಜ್ಞಾನದ ಕಣ್ಣು ತೆರೆಯುತ್ತದೆ. ಸೀತೆಯನ್ನು ಗೆಲ್ಲಬೇಕೆಂಬ ಹಠ ಕೊನೆಗೆ ದೂರವಾಗುತ್ತದೆ. ಆಕೆಯ ತಪಶ್ಶಕ್ತಿಯ ಬೆಳಕಿನಲ್ಲಿ ರಾವಣನ ಅಜ್ಞಾನದ ಕತ್ತಲು ದೂರವಾಗಿತ್ತದೆ.

ಪತೀವ್ರತೆಯರೇ ಇಲ್ಲವೆಂದು ನಂಬಿದ್ದ ರಾವಣ ಕೊನೆಗೆ ಸೀತೆಯ ಅಚಲ ವ್ರತವನ್ನು ನೋಡಿ 'ಹದಿಬದಿಯ ರಥಿದೇವಿ' ಎಂದು ಪ್ರತಿಕ್ರಿಯಿಸುತ್ತಾನೆ. ತನಗೆ ತಾನೇ ಆತ್ಮವಿಮರ್ಶೆಯನ್ನೂ ಮಾಡಿಕೊಳ್ಳುತ್ತಾನೆ:

*"ಈಕೆಯಾರ್ ಈ ಸೀತೆ? ಈಕೆಯ ಪಡೆಯಲ್*
*ತಪಂಗೆಯ್ದುದುದು ಸಫಲಮಾದಪುದೇ? ನೀನಂದು*

*ಪಂಚವಟಿಗೆನ್ನ ಪುಷ್ಪಕವನೇರುವ ಮೊದಲ್*
*ನುಡಿದ ನುಡಿ ತೊದಲಲ್ತು. ಯಾವ ! ಪುಸಿಗೆಯ್ಯಲ್*
*ಪ್ರಯತ್ನಿಸುವೆನಂತ್ಯಂಬರಂ: ಆ ಪ್ರಯತ್ನಮೆ*
*ತಪಸ್ಸಾಧನಂ ಅವರ್ಥ ಮೇಗಳುಂ ತಪಂ'* [20]

ಎಂದು ಸೀತೆಯ ಮಹಾನ್ ಶಕ್ತಿ ಕೊಂಡಾಡುತ್ತಾನೆ. ಅವನು ಸೀತೆಯಿಂದ ಪಡೆದ 'ದರ್ಶನ' ಸ್ವಪ್ನದ ಮೂಲಕ ಅನಾವರಣಗೊಳ್ಳುತ್ತದೆ. ರಾವಣನಿಗೆ ರಾಮ ಜಯಕ್ಕಿಂತ ಸೀತೆ ಸೋಲುವುದು ಸೋಜಿಗವೆನಿಸುತ್ತದೆ.

ರಾವಣನು ಕಂಡ ಸ್ವಪ್ನದಲ್ಲಿ ಜಗದಂಬೆಯ ದೇವಾಲಯವೊಂದರಲ್ಲಿ ಮಾತೆಯ ವಿಗ್ರಹದ ಜಾಗದಲ್ಲಿ ಭೀಮಾಕಾರದ ಅಶ್ವವೊಂದು ತನ್ನ ಮುಂಗಾಲನ್ನೆತ್ತಿನಿಂತಿರುತ್ತದೆ. ಮೇಲಿನಿಂದ ಬಂದ ಖಡ್ಗವೊಂದು ಕುದುರೆಯ ಕತ್ತನ್ನು ಕತ್ತರಿಸುತ್ತದೆ. ಇದರಿಂದ ನೆತ್ತರ ಪ್ರವಾಹವುಂಟಾಗುತ್ತದೆ. ರಾವಣ ಹಾಗೂ ಕುಂಭಕರ್ಣ ಓಡತೊಡಗುತ್ತಾರೆ. ಅಶ್ವದ ಮುಂಡವು ಅವರನ್ನು ಹಿಂಬಾಲಿಸುತ್ತಾ ದೋಣಿ ಏರಿದ ಇಬ್ಬರನ್ನು ಬಿಡದೆ ಬೆನ್ನುಬೀಳುತ್ತದೆ. ದೋಣಿ ತಲೆಕೆಳಗಾಗುತ್ತದೆ. ರಾವಣ ಹಾಗೂ ಕುಂಭಕರ್ಣ ಇಬ್ಬರೂ ರಕ್ತದ ಪ್ರವಾಹದಲ್ಲಿ ಈಜಿ ದಡಸೇರುತ್ತಾರೆ. ಆ ವೇಳೆಗಾಗಲೇ ಅವರು ಶಿಶುಗಳಾಗಿ ರೂಪತಾಳಿರುತ್ತಾರೆ. ಆಗ ಅಲ್ಲಿಗೆ ಬಂದ ಸೀತೆ ಆ ಮಕ್ಕಳನ್ನು ಎತ್ತಿ ಮುದ್ದಾಡಿ, ತನ್ನ ಎದೆಹಾಲನ್ನು ಕೊಟ್ಟು ಅಪ್ಪುತ್ತಾಳೆ. ಇದರಿಂದ ನಾವು ಗಮನಿಸಬೇಕಾದ ಅಂಶವೆಂದರೆ ರಾವಣ ಹೊಳೆಯಲ್ಲಿ ಈಸಿ ಕಷ್ಟಪಡುತ್ತಿರುವುದು. ದುಷ್ಟತನ, ದುರುಳತನವನ್ನು ಕಳೆದುಕೊಳ್ಳುತ್ತಿರುವುದರ ಸಂಕೇತವಾಗಿದೆ. ಇದು ಲಂಕೆಯಲ್ಲಿ ಸತ್ತ ಸಹಸ್ರಾರು ಜನರ ನೆತ್ತರ ಹೊಳೆಯಾಗಿದೆ. ಈ ಎಲ್ಲವನ್ನು ಕಂಡ ರಾವಣ ಸೀತೆ ಕೇವಲ ಹೆಣ್ಣಲ್ಲ. ಅವಳೊಬ್ಬಳು ಶಕ್ತಿ ಎಂದು ಗ್ರಹಿಸುತ್ತಾನೆ. ಅವನ ಮನದ ಕತ್ತಲು ಕಳೆದಾಗ ಸೀತೆಯಲ್ಲಿ ಮಕ್ಕಳಾಗಿ ನಲಿಯುವ ಕನಸ್ಸನ್ನು ಕಾಣುತ್ತಾನೆ. ಇದು ಸೀತೆಯಿಂದ ರಾವಣನಿಗುಂಟಾದ ದರ್ಶನದ ರೂಪಕವಾಗಿದೆ. ಈ ಸ್ವಪ್ನದೃಶ್ಯವು ಇನ್ನೊಂದು ರೀತಿಯಲ್ಲಿ ವಿಶೇಷವೆನಿಸುತ್ತದೆ. ಅದೇನೆಂದರೆ, ಕುವೆಂಪುರವರಿಗೆ ಈ ದೃಶ್ಯದ ಕಲ್ಪನೆ ಬಂದದ್ದು ಅವರ ಸ್ವಪ್ನದಲ್ಲಿ ಹೀಗೆ ಕುವೆಂಪುರವರ ಈ ಅಭೂತಪೂರ್ವ ಕಲ್ಪನೆಯು ಸೀತೆ ಹಾಗೂ ರಾವಣರಿಬ್ಬರಿಗೂ ವಿಶೇಷ ಸ್ಥಾನವನ್ನು ಕಲ್ಪಿಸಿದೆ.

ಸೀತೆಗೆ ರಾವಣನಿಂದ ಬಿಡುಗಡೆ ಪಡೆದ ನಂತರ ತನ್ನ ಚಾರಿತ್ರ್ಯವನ್ನು ಮತ್ತೆ ಪರೀಕ್ಷೆಗೆ ಒಳಗೆ ಮಾಡಬೇಕಾದ ಸಂದರ್ಭಬರುತ್ತದೆ. ಪವಿತ್ರತೆ, ಶೀಲ ಎಂಬುದು ಕೇವಲ ಹೆಣ್ಣಿಗೆ ಸಂಬಂಧಿಸಿದ ವಿಷಯ ಎಂಬುದನ್ನು ಶತಮಾನಗಳಿಂದಲೂ ಪುರುಷ ನಿರ್ಮಿತ ಸಮಾಜ ಹೇಳುತ್ತ ಬಂದಿದೆ. ಆದರೆ ಸ್ತ್ರೀಪರ ಕಾಳಜಿಗಳುಳ್ಳ ಕುವೆಂಪು ಅವರು ಶೀಲ, ಪಾವಿತ್ರ್ಯತೆ ಇವುಗಳು ಹೆಣ್ಣಿಗಷ್ಟೇ ಅಲ್ಲ, ಗಂಡಿಗೂ ಮುಖ್ಯ ಎನ್ನುತ್ತಾರೆ. ಕುಟುಂಬದಲ್ಲಾಗಲೀ ಸಮಾಜದಲ್ಲಾಗಲೀ ಇಬ್ಬರಿಗೂ ಸಮಾನ ಜವಾಬ್ದಾರಿಗಳಿರಬೇಕು. ಸಮಾಜದ ಎಲ್ಲ ಮಿತಿಗಳನ್ನು ಸ್ತ್ರೀಯೊಬ್ಬಳಿಗೇ ಹೇರುವುದು ಸರಿಯಲ್ಲವೆಂದು ಈ ಕಾವ್ಯದ ಮೂಲಕ ತಿಳಿಸುತ್ತಾರೆ. ಸೀತೆಯ ಜೊತೆ ಶ್ರೀರಾಮನಿಗೂ ಅಗ್ನಿ ಪ್ರವೇಶ ಮಾಡಿಸುತ್ತಾರೆ. ಇದು ಎಲ್ಲರನ್ನೂ ಬೆರಗುಗೊಳಿಸುವಂಥದ್ದು. 'ಶ್ರೀರಾಮಾಯಣದರ್ಶನ'ದ ವಿಶೇಷತೆಗಳಲ್ಲಿ ಇದು ಪ್ರಮುಖ ಪಾತ್ರವಹಿಸುತ್ತದೆ.

ನಮ್ಮ ಪರಂಪರೆ, ಸೀತೆಯೊಬ್ಬಳನ್ನೇ ಅಗ್ನಿ ಪರೀಕ್ಷೆಗೆ ದೂಡಿತ್ತು. "ಸೀತೆಯ ಪಾತ್ರವನ್ನು 'ಆದರ್ಶನಾರಿ'ಯ ಸ್ಥಾನಕ್ಕೇರಿಸಿ ಆಕೆಯ ವ್ಯಕ್ತಿತ್ವದ ಲಕ್ಷಣಗಳಾಗಿದ್ದ ಪರ ವಿಧೇಯತೆ, ತಾಳ್ಮೆ, ಪರಾಧೀನತೆ, ಪತಿಯಲ್ಲಿ ಪ್ರಶ್ನಾತೀತವಾದ ನಂಬಿಕೆ ಇವೇ ಮುಂತಾದವುಗಳನ್ನು ಆದರ್ಶನಾರಿ ಗುಣಗಳೆಂದು ಘೋಷಿಸಲಾಯಿತು"[22] ಕಾಡಿನಲ್ಲಿ ಅಪಹರಣಕ್ಕೊಳಗಾದ ಸೀತೆ ತನ್ನ ಪತಿಯಲ್ಲಿ ಅಚಲವಾದ ನಂಬಿಕೆಯನ್ನು ಇರಿಸಿಕೊಂಡಿದ್ದರೂ ಆಕೆಯ ಪಾತೀವ್ರತ್ಯವನ್ನು ಪರೀಕ್ಷೆಗೆ ಒಡ್ಡಿದಂಥ ಸ್ಥಿತಿಯನ್ನು 'ಸಹಜಪುರುಷ ಹಕ್ಕು' ಎಂದು ಭಾವಿಸುವ ಜನರಿದ್ದಾರೆ. ಆದರೆ ಕುವೆಂಪು ಈ ಎಲ್ಲ ಪ್ರಶ್ನೆಗಳಿಗೆ ತಮ್ಮ ಕಾವ್ಯದ ಮೂಲಕ ಉತ್ತರ ಕೊಟ್ಟಿದ್ದಾರೆ, ಸೀತೆಯ ಜೊತೆ ರಾಮನ ಅಗ್ನಿ ಪರೀಕ್ಷೆಯನ್ನು ಮೂಡಿಸಿ ನಿಯಮಗಳು ಇಬ್ಬರಿಗೂ ಒಂದೇ ಎಂಬ ಸ್ತ್ರೀಪುರುಷ ಸಮಾನತೆಯ ನಿಲುವಿಗೆ ಒತ್ತು ಕೊಟ್ಟಿದ್ದಾರೆ.

ಕುವೆಂಪುರವರ ಈ ನಿಲುವು ಬಹುಪರಿಣಾಮಕಾರಿಯಾದ್ದು. ಏಕೆಂದರೆ ಸ್ತ್ರೀಯರ ಪಾತಿವ್ರತ್ಯವನ್ನು ಧಾರ್ಮಿಕ ಗ್ರಂಥಗಳು ವೈಭವೀಕರಿಸುತ್ತವೆ. ಆದರೆ ಅದೇ ಗ್ರಂಥಗಳು ಪುರುಷನಿಗೆ ಯಾವುದೇ ನಿರ್ಬಂಧಗಳನ್ನು ಹೇರುವುದಿಲ್ಲ. ಆದರೆ 'ಶ್ರೀರಾಮಾಯಣದರ್ಶನಂ' ಕಾವ್ಯದಲ್ಲಿ ಸೀತೆಯಂಥ ಆದರ್ಶನಾರಿಯಂಥ. "ಹೆಂಗಸಿನಿಂದಲೇ ಗಂಡಸಿನ ಅಸಂಸ್ಕೃತಿಗಳು ತೊಲಗಿ, ಅವನಿಗೆ ಸುಸಂಸ್ಕೃತಿ ಸಮನಿಸುತ್ತದೆ. ರೂಪ ಶಿಲೆಯನ್ನು ಚಾರುವಿಗ್ರಹವನ್ನಾಗಿ ಕಡೆಯದ ಶಿಲ್ಪಿ ಅವಳು, ಹೆಣ್ಣಿನಿಂದಲೇ ಗಂಡಿನ ಸಂಸ್ಕಾರ, ಉದ್ಧಾರಗಳು. ಅವಳ ತಪಸ್ಸೆ ಗಂಡಿಗೆ ತಾರಕ.

ನಾಗವರ್ಮನ 'ಕಾದಂಬರಿ'ಯಲ್ಲಿ ಪುಂಡರಿಕ, 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದಲ್ಲಿ ರಾವಣ ಉದ್ಧಾರಗೊಳ್ಳುವುದು ಮಹಿಳೆಯರ ತಪಶ್ಶಕ್ತಿಯಿಂದಲೆ; ಹೆಣ್ಣು ಕೆಡಹುದಕ್ಕೆ ಹೊರಟರೆ ಅದನ್ನು ಯಾರೂ ತಡೆಯಲಾರರು; ಗಂಡು ಕೆಡುವುದಕ್ಕೆ ಹೊರಟರೆ ಹೆಣ್ಣು ಅದನ್ನು ತಪ್ಪಿಸಬಲ್ಲಳು"[22] ಪ್ರತಿಮನೆಯಲ್ಲೂ ಹೆಣ್ಣು ತಪಸ್ವಿನಿ ರೀತಿಯಲ್ಲಿ ಎಲ್ಲರನ್ನು ಕಾಯುತ್ತಾ ಕುಟುಂಬದವರ ನಿರಂತರ ಏಳಿಗೆಗಾಗಿ ಶ್ರಮಿಸುತ್ತಾಳೆ. ಆದ್ದರಿಂದ ಕುವೆಂಪು ಮೊದಲು ಅವಳಿಗೆ ನಮಸ್ಕರಿಸುತ್ತಾರೆ. ಅವರ 'ಮನೆಮನೆಗೆ ತಪಸ್ವಿನಿಗೆ' ಎಂಬ ಪದ್ಯದಲ್ಲಿ ಈ ಶಕ್ತಿ ರೂಪಿಣಿಯರನ್ನು ನೆನೆದಿರುವುದನ್ನು ನೋಡಬಹುದಾಗಿದೆ:

*'ಆ ಸೀತೆಯೊ ಮಾಶ್ವೇತೆಯೊ*
*ಸಾವಿತ್ರಿಯೊ ದಮಯಂತಿಯೊ*
*ಆರಾದರೂ ಸರಿಯೆ*
*ಪಿರಿದನು ನಾನರಿಯೆ!"* [24]

ಹೀಗೆ ಕುವೆಂಪುರವರು ತಪಸ್ವಿಗೆ ಮಹತ್ತರವಾದ ಭಿತ್ತಿಯನ್ನು ಕಟ್ಟಿಕೊಡುತ್ತಾರೆ. ಅದರಲ್ಲೂ ಸ್ತ್ರೀಯೊಬ್ಬಳ ತಪಸ್ವಿಗೆ ಮಹಾಶಕ್ತಿ ಇದೆ ಎಂದು ತಿಳಿಸುತ್ತಾರೆ. 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದಲ್ಲಿ ಸೀತೆ ಸ್ತ್ರೀತ್ವದ ಮಹಾನ್ ಶಕ್ತಿಯಾಗಿದ್ದಾಳೆ. ಸೀತೆಗೆ ಮಹತ್ ದರ್ಶನವನ್ನು ಕಟ್ಟಿಕೊಡುತ್ತಾರೆ. ಸೀತೆಯ ಬದುಕೇ ಇಲ್ಲಿ ಒಂದು ರೀತಿಯ ತಪಸ್ಸು ಎಂಬುದನ್ನು ದೃಢಪಡಿಸಿದ್ದಾರೆ. ಸೀತೆಯು ತನ್ನ ವಿಶೇಷತೆಗಳ ಮೂಲಕ ಹೀಗೆ ಗುರುತಿಸಿಕೊಳ್ಳುವುದು ಅವಳ ಐಡಂಟಟಿಯನ್ನು ತಿಳಿಸುತ್ತದೆ. ಪುರಾಣದ ಸ್ತ್ರೀ – ಪುರುಷ ಪಾತ್ರಗಳ ಪುನರ್ ಮೌಲ್ಯೀಕರಣಕ್ಕೆ ಒಳಪಡಿಸಿರುವುದು

ಕುವೆಂಪು ಅವರ ವೈಶಿಷ್ಟ್ಯವಾಗಿದೆ. ಆದರೆ, ಸ್ತ್ರೀವಾದಿ ಚಿಂತನೆಗಳು, ಹೆಣ್ಣು ಒಂದು 'ಶಕ್ತಿ' ಎಂಬ ಅಪರಿಮಿತ ವಿನ್ಯಾಸಗಳ ಚಿತ್ರಣಗಳ ಮೂಲಕ ಸ್ತ್ರೀಯರನ್ನು ಭ್ರಾಮಕ ನೆಲೆಯಲ್ಲಿಟ್ಟು ವಂಚಿಸಲಾಗುತ್ತಿದೆ ಎಂದೇ ಭಾವಿಸುತ್ತವೆ.

## ಅಡಿ ಟಿಪ್ಪಣಿ

1. ಗಂಗೋತ್ರಿ, ಗೀತಾ ಬುಕ್ ಹೌಸ್, ಮೈಸೂರು 1968, ಪು. 320
2. ಶ್ರೀ ರಾಮಾಯಣ ದರ್ಶನಂ, ಮಹಾಸಂಪುಟ, ಪು. 43
3. ಶ್ರೀ ರಾಮಾಯಣ ದರ್ಶನಂ, ಅಯೋಧ್ಯಾಕಾಂಡ, ಪು. 54
4. ಅದೇ, ಪು. 54
5. ಶ್ರೀ ರಾಮಾಯಣ ದರ್ಶನಂ, ಕುವೆಂಪು ಸಾಹಿತ್ಯ ಲೋಕ, ಪು. 48
6. ಶ್ರೀ ರಾಮಾಯಣ ದರ್ಶನಂ, ಅಯೋಧ್ಯಾಕಾಂಡ, ಪು. 54
7. ಅದೇ, ಪು. 410
8. ಅದೇ, ಪು. 11
9. ಶ್ರೀ ರಾಮಾಯಣ ದರ್ಶನಂ ಪಾತ್ರಲೋಕ, ಡಾ॥ ಎಚ್. ಕುಶಾಲಪ್ಪ ಗೌಡ, ಪು. 247
10. ಶ್ರೀ ರಾಮಾಯಣ ದರ್ಶನಂ, ಕಿಷ್ಕಿಂದಾ ಸಂಪುಟ, ಪು. 241
11. ಅದೇ, ಪು. 347
12. ಅನಿಕೇತನ ಸಪ್ನ ಬುಕ್ ಹೌಸ್ ಬೆಂಗಳೂರು 2005, ಪು 253
13. ಶ್ರೀ ರಾಮಾಯಣ ದರ್ಶನಂ,ಕಿಷ್ಕಿಂದಾ ಸಂಪುಟ, ಪು. 336
14. ಅದೇ, ಪು. 491
15. ಶ್ರೀ ರಾಮಾಯಣ ದರ್ಶನಂ, ಶ್ರೀ ಸಂಪುಟ, ಪು. 669
16. ಕುವೆಂಪು ಸಂಸ್ಕೃತಿ ಚಿಂತನೆ, ಸಂ.ಪೊ.ಕೆ.ಸುಮಿತ್ರಾಬಾಯಿ, ಪು. 134
17. ಶ್ರೀ ರಾಮಾಯಣ ದರ್ಶನಂ, ಶ್ರೀ ಸಂಪುಟ, ಪು. 480
18. ಅದೇ, ಪು. 481
19. ಕುವೆಂಪು ಪುನರ್ಮನನ, ಸಂ. ಕೆ. ಬೈರಪ್ಪ ಮತ್ತು ಅರವಿಂದ ಮಾಲಗತ್ತಿ ಮೈಸೂರು ವಿಶ್ವವಿದ್ಯಾಲಯ 2004, ಪು. 121
20. ಶ್ರೀ ರಾಮಾಯಣ ದರ್ಶನಂ, ಲಂಕಾ ಸಂಪುಟ, ಪು. 610
21. ಮಹಿಳೆ ಸಮಾಜ ಮತ್ತು ಸಂಸ್ಕೃತಿ, ಡಾ॥ ಆರ್. ಇಂದಿರಾ, ಹಂಪಿ ಕನ್ನಡ ವಿಶ್ವವಿದ್ಯಾಲಯ, 2002, ಪು. 102
22. ಸಹ್ಯಾದ್ರಿ ಸಂ. ದೇ. ಜವರೇಗೌಡ ವಾಣಿವಿಲಾಸಪುರ, ಮೈಸೂರು, 1975, ಪು. 1095
23. ಸಮಗ್ರ ಪದ್ಯ ಸಂಪುಟ, ಕುವೆಂಪು,

## ಇ. ಊರ್ಮಿಳೆ – ಅನಂತ ನಿರೀಕ್ಷೆ ಮತ್ತು ಕರ್ತವ್ಯ ಪ್ರಜ್ಞೆ

ಊರ್ಮಿಳೆ ಜನಕರಾಜನ ಪುತ್ರಿ ಹಾಗು ಲಕ್ಷ್ಮಣನ ಪತ್ನಿಯಾಗಿ ತನ್ನ ಬದುಕನ್ನೇ ತಪೋರಂಗವನ್ನಾಗಿ ಮಾಡಿಕೊಂಡವಳು. ಲಕ್ಷ್ಮಣನು ವನವಾಸದಿಂದ ಹಿಂತಿರುಗಿ ಬರುವವರೆಗೂ ಅಂದರೆ ಸತತ ಹದಿನಾಲ್ಕು ವರ್ಷಗಳು ತನಗೆ ಪಾತಿವ್ರತ್ಯವನ್ನು ನಿಷ್ಠೆಯಿಂದ ಆಚರಿಸಿದವಳು. ತಪಸ್ಸಿಗೆ ಪ್ರೇರಣೆಯಾಗಿದ್ದ ಊರ್ಮಿಳೆಯ ಮನೋಶಕ್ತಿ, ದೃಢತೆಗಳು ಬೆರಗುಕೊಳಿಸುವಂಥದ್ದು. ರಾಮಾಯಣದ ಕಥೆಗಳಲ್ಲಿ ಸೀತೆಯಷ್ಟೇ ಮಹತ್ವದ ಸತಿಯಾದ ಉರ್ಮಿಳೆ ಯಾರ ಗಮನಕ್ಕೂ ಬರುವುದಿಲ್ಲ.

ವಾಲ್ಮೀಕಿ ರಾಮಾಯಣದಲ್ಲಿ ಊರ್ಮಿಳೆಗೆ ಯಾವುದೇ ಮಹತ್ವದ ಸ್ಥಾನ ಕೊಟ್ಟಿರುವುದನ್ನು ಕಾಣುವುದಿಲ್ಲ. ಊರ್ಮಿಳೆಯ ಹೆಸರು ಪ್ರಸ್ತಾಪವಾಗಿರುವುದು ಕೇವಲ ಎರಡು ಬಾರಿ ಮಾತ್ರ. ಶಿವಧನಸ್ಸನ್ನು ರಾಮನು ಮುರಿದು ಸೀತೆಯನ್ನು ವರಿಸುವಾಗ ಜನಕಮಹಾರಾಜ ತನ್ನ ಪುತ್ರಿ ಊರ್ಮಿಳೆಯನ್ನು ಲಕ್ಷ್ಮಣನಿಗೆ ವಿವಾಹ ಮಾಡಿಸುತ್ತಾನೆ. ಇಲ್ಲಿ ಜನಕನ ಬಾಯಿಂದ ಊರ್ಮಿಳೆಯ ಹೆಸರು ಒಮ್ಮೆ ಮಾತ್ರ ಬರುತ್ತದೆ. ಇನ್ನೊಮ್ಮೆ ಪ್ರತ್ಯೇಕವಾಗಿ ಊರ್ಮಿಳೆಯ ಹೆಸರು ಪ್ರಸ್ತಾಪಕ್ಕೆ ಬರುವುದು ದಶರಥ ತನ್ನ ಮಕ್ಕಳು, ಸೊಸೆಯರನ್ನು ಅಯೋಧ್ಯೆಗೆ ಕರೆದುಕೊಂಡು ಮರಳುವ ಸಂದರ್ಭದಲ್ಲಿ. ಕೌಸಲ್ಯೆ, ಕೈಕೆ, ಸುಮಿತ್ರೆ ಇವರುಗಳು ಸ್ವಾಗತಿಸುವಾಗ ಆದರೆ ಮುಂದೆಲ್ಲಾ ವಾಲ್ಮೀಕಿ ರಾಮಾಯಣದಲ್ಲಿ ಊರ್ಮಿಳೆ ಅಂಚಿಗೆ ಸರಿದಿರುವ ಪಾತ್ರೆಯಾಗಿದೆ. ಗುರುತಿಸಬಹುದು. ಜನಪದರ ದೃಷ್ಟಿಯಲ್ಲಿ ಊರ್ಮಿಳೆ ದೇವತೆಯಾಗಿದ್ದಾಳೆ. ಆಕೆಯ ಪಾತಿವ್ರತ್ಯವನ್ನು ಕೊಂಡಾಡುವಲ್ಲಿ ಅವರು ಸೃಷ್ಟಿಸಿರುವ ಕತೆ ಊರ್ಮಿಳೆಯ ತಪಸ್ಸನ್ನು ಇನ್ನಷ್ಟು ಗಟ್ಟಿಗೊಳಿಸುತ್ತದೆ. ಅತ್ತೆ, ಮಾವ, ಗಂಡ, ಹೆಂಡತಿ, ಅಣ್ಣತಂಗಿ, ತಂದೆತಾಯಿ ಈ ಎಲ್ಲ ಸಂಬಂಧಗಳು ಒಂದೊಂದು ರೀತಿಯಲ್ಲಿ ಇವರಿಗೆ ಮುಖ್ಯವಾಗುತ್ತವೆ. ಯಾವುದೂ ಕಡಿಮೆ ಪ್ರಧಾನ ಎನಿಸದೆ ಊರ್ಮಿಳೆ ಸೀತೆಯಷ್ಟೇ ಆದರ್ಶಳಾಗುತ್ತಾಳೆ.

ಕುವೆಂಪುರವರು ತಮ್ಮ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ ಊರ್ಮಿಳೆಗೆ ಮುಖ್ಯಸ್ಥಾನವನ್ನು ಕೊಟ್ಟಿದ್ದಾರೆ. ಪರಂಪರೆಯು ಅಂಚಿಗೆ ತಳ್ಳಲ್ಪಟ್ಟ ಈ ಪಾತ್ರವನ್ನು ಕೇಂದ್ರವಾಗಿರಿಸಿಕೊಂಡು ಆ ಮೂಲಕ ಈ ಕೃತಿಯನ್ನು ಹೊಸ ತಾತ್ವಿಕ ನೆಲೆಯಲ್ಲಿ ನಿರ್ಮಿಸಿದ್ದಾರೆ. ಸತಿಯಾದವಳು ಗಂಡನ ಪ್ರತಿಯೊಂದು ಹೆಜ್ಜೆಯಲ್ಲೂ ಅವನ ಹಿಂದಿರಬೇಕು. ಅವನ ಕಷ್ಟಸುಖ ಎಲ್ಲದರಲ್ಲೂ ಭಾಗಿಯಾಗಬೇಕು ಎಂಬುದು ಪರಂಪರೆಯಿಂದ ಬಂದ ನಂಬಿಕೆ. ಇದಕ್ಕೆ ಬದ್ಧಳಾಗಿ ಸೀತೆಯು ರಾಮನ ಜೊತೆ ವನವಾಸಕ್ಕೆ ಹೊರಡುತ್ತಾಳೆ. ಕಾಡಿನಲ್ಲಿ ಎದುರಾದ ಕಷ್ಟ ಸುಖಗಳೆಲ್ಲವನ್ನೂ ಅನುಭವಿಸಿಕೊಂಡು ರಾಮನ ಜೊತೆಯಲ್ಲಿ ಇರುತ್ತಾಳೆ. ಆದರೆ ಊರ್ಮಿಳೆ ಮಾತ್ರ ಹದಿನಾಲ್ಕು ವರ್ಷ ಪತಿಯಿಂದ ಧೀರ್ಘಕಾಲ ದೂರವಿದ್ದು ಪಾತಿವ್ರತ್ಯವನ್ನು ಕಾಪಾಡಿಕೊಂಡಿರುವುದು ಸಾಮಾನ್ಯ ವಿಷಯವಲ್ಲ. ಈ ಸಂದರ್ಭದಲ್ಲಿ ತನ್ನ ದೃಢತೆಯನ್ನು ಕಾಪಾಡಿಕೊಂಡು ಗಂಡನ ಏಳಿಗೆಗಾಗಿ ನಿರಂತರ ತಪಸ್ಸನ್ನಾಚರಿಸಿದ ಮಹಾಸಾಧಕಿಯಾಗಿ ಊರ್ಮಿಳೆ ಕಂಡು ಬರುತ್ತಾಳೆ.

ಶ್ರೀರಾಮನ ಪಟ್ಟಾಭಿಷೇಕದ ಸಿದ್ಧತೆಗಾಗಿ ಹೋಗಿದ್ದ ಲಕ್ಷ್ಮಣ ಮನೆಯ ಬಾಗಿಲಿಗೆ ಬರುತ್ತಾನೆ. ಲಕ್ಷ್ಮಣ ಬಂದ ಕೂಡಲೇ ಊರ್ಮಿಳೆ ಗಂಡನಿಗೆ ಕೈಕಾಲು ತೊಳೆಯಲು ಬಿಸಿನೀರಿನ ತಂಬಿಗೆಯನ್ನು ಹಿಡಿದು ತರುತ್ತಾಳೆ. ಆದರೆ ಲಕ್ಷ್ಮಣ ಕೈ ಕಾಲು ತೊಳೆದು ಕೊಳ್ಳುವಷ್ಟರಲ್ಲಿ ಮಂಗಳವಾದ್ಯಗಳ ಧ್ವನಿ ನಿಂತು ಹೋಗುತ್ತದೆ. ಇದರಿಂದ ಶಂಕಿತನಾದ ಲಕ್ಷ್ಮಣ ಕಾರಣವೇನೆಂದು ತಿಳಿದು ಬರುತ್ತೇನೆ ಎಂದು ತೆರಳಿ, ಊರ್ಮಿಳೆಗೆ ಒಂದು ಮಾತೂ ಹೇಳದೆ ಹಾಗೇ ರಾಮನೊಡನೆ ವನವಾಸಕ್ಕೆ ಹೋಗಿಬಿಡುತ್ತಾನೆ. ಆದರೂ ಊರ್ಮಿಳೆ ನಿಂತ ಜಾಗದಿಂದ ಕದಲುವುದಿಲ್ಲ. ಪತಿಯ ನಿರೀಕ್ಷೆಯಲ್ಲಿ ಹಾಗೇ ನಿಂತು ಬಿಡುತ್ತಾಳೆ. ಹದಿನಾಲ್ಕು ವರ್ಷಗಳು ಕಳೆದು ಲಕ್ಷ್ಮಣ ವನವಾಸದಿಂದ ಹಿಂತಿರುಗಿ ಮನೆಯ ಬಾಗಿಲಿಗೆ ಬಂದಾಗ ಕೂಡ ಊರ್ಮಿಳೆ ಹಾಗೇ ನಿಂತಿರುತ್ತಾಳೆ. ತಂಬಿಗೆಯಲ್ಲಿದ್ದ ಬಿಸಿ ನೀರು ಹಾಗೇ ಹಬೆಯಾಡುತ್ತಲೇ ಇರುತ್ತದೆ. ಅದೇ ನೀರಿನಿಂದ ಲಕ್ಷ್ಮಣನು ಕೈಕಾಲುಗಳನ್ನು ತೊಳೆದುಕೊಂಡು ಒಳಗೆ ಹೋಗುತ್ತಾನೆ. ಈ ಕತೆಯು ಕಟ್ಟಿಕೊಡುವ ಧ್ವನಿ ಎಷ್ಟೊಂದು ಮಹತ್ವಪೂರ್ಣವಾದುದೆಂದರೆ ಅದು ಊರ್ಮಿಳೆಯ ಸತೀತ್ವಕ್ಕೆ ಹಿಡಿದ ಅನುಪಮ ಕನ್ನಡಿಯಾಗಿದೆ.

ಭಾರತೀಯ ಸಾಹಿತ್ಯದ ಮಹಾನ್ ಚಿಂತಕ ಹಾಗೂ ಕವಿಯಾದ ರವೀಂದ್ರನಾಥಠಾಕೂರರು ಊರ್ಮಿಳೆಯನ್ನು 'ಕಾವ್ಯದ ಅನಾದರ' ವೆಂದೇ ಕರೆದಿದ್ದಾರೆ. "ಲಕ್ಷ್ಮಣನು ರಾಮಚಂದ್ರನಿಗಾಗಿ ಸರ್ವವಿಧಗಳಲ್ಲಿಯೂ ಸ್ವಾರ್ಥತ್ಯಾಗ ಮಾಡಿದನು. ಆ ಕೀರ್ತಿಯು ಈಗಲೂ ಭರತಖಂಡದಲ್ಲಿ ಮನೆಮನೆಯಲ್ಲಿಯೂ ಕೇಳಿ ಬರುತ್ತದೆ. ಆದರೆ ಸೀತಾದೇವಿಗಾಗಿ ಊರ್ಮಿಳಾದೇವಿಯು ಮಾಡಿದ ಸ್ವಾರ್ಥ ತ್ಯಾಗವು ಜಗತ್ತಿನಲ್ಲಿ ಮಾತ್ರವೇ ಅಲ್ಲ, ಕಾವ್ಯದಲ್ಲಿಯೂ ಕೂಡ ಕಂಡುಬರುವುದಿಲ್ಲ. ದೇವತಾ ಸ್ವರೂಪರಾದ ಸೀತಾರಾಮರಿಗಾಗಿ ಸ್ವಾರ್ಥಕ್ಕಿಂತಲೂ ಹೆಚ್ಚಾಗಿ ತನ್ನ ಪತಿಯನ್ನೇ ದಾನಮಾಡಿದಳು. ಕಾವ್ಯವು ಆ ಮಾತನ್ನೇ ಎತ್ತುವುದಿಲ್ಲ, ಸೀತಾದೇವಿಯ ಕಣ್ಣೀರಿನಲ್ಲಿ ಊರ್ಮಿಳಾ ದೇವಿಯು ಸಂಪೂರ್ಣವಾಗಿ ಕೊಚ್ಚಿಕೊಂಡು ಹೋದಳು"[1] ಎಂದು ರಾಮಾಯಣದಲ್ಲಿ ಈ ಸ್ತ್ರೀ ಪಾತ್ರಗಳ ನಡುವಿನ ವೈರುಧ್ಯಗಳನ್ನು ಎತ್ತಿ ತೋರಿಸಿದ್ದಾರೆ. ವಾಲ್ಮೀಕಿ ರಾಮಾಯಣದಲ್ಲಿ ಊರ್ಮಿಳೆಯನ್ನು ಅಂಚಿಗೆ ತಳ್ಳಿ ಆಕೆಗೆ ಒಂದು ಅಸ್ತಿತ್ವವನ್ನೇ ಕಲ್ಪಿಸಿಕೊಟ್ಟಿಲ್ಲವೆಂದು ದೂರುತ್ತಾರೆ. "ನೀನು ಉಷಃ ಕಾಲದಲ್ಲಿ ಕಣ್ಣಿಗೆ ಬೀಳುವ ನಕ್ಷತ್ರದಂತೆ" ಎಂದು ಆಕೆಯನ್ನು ಬಣ್ಣಿಸುತ್ತಾರೆ. ಹೀಗೆ ಊರ್ಮಿಳೆ ಕವಿಗಳಿಂದ ಉಪೇಕ್ಷೆಗೊಳಪಟ್ಟರೂ ಕಾವ್ಯದ ಅನಾದರಕ್ಕೆ ಗುರಿಯಾದರೂ ಕುವೆಂಪು ಅವರು ಈ ಪಾತ್ರವನ್ನು ಪ್ರಧಾನ ಭೂಮಿಕೆಗೆ ತರುತ್ತಾರೆ. ಸೀತೆಯಷ್ಟೇ ಸ್ಥಾನವನ್ನು ಊರ್ಮಿಳೆಗೆ ಕೊಟ್ಟಿದ್ದಾರೆ.

ಊರ್ಮಿಳೆಯಂಥ ಮಹಾತಪಸ್ವಿಯ ಬಗ್ಗೆ ಕುವೆಂಪುರವರ ಮಾತುಗಳು ಹೀಗಿವೆ. "ಊರ್ಮಿಳೆಯ ತಪಸ್ಸು ಎಲ್ಲರಿಗಿಂತಲೂ ಕಷ್ಟಕರ. ಏಕೆಂದರೆ ಅದೊಂದು ಅನಂತ ನಿರೀಕ್ಷೆ. ಇತರರ ತಪಸ್ಸಿನಲ್ಲಿ ಕ್ರಿಯೆಯ ಮತ್ತು ಸಾಹಸದ ವಿರಾಮವಿದೆ. ಊರ್ಮಿಳೆಯ ತಪಸ್ಸಾದರೂ ನಿಶ್ಚಲತೆಯಿಂದಲೂ ನೀರವತೆಯಿಂದಲೂ ನಿರೀಕ್ಷೆಯ ದಿರ್ಘತೆಯಿಂದಲೂ ಅವಿರಾಮವಾಗಿದೆ. ಆಕೆಯದು ಅಹಲ್ಯೆಯ ತಪಸ್ಸಿನಂತೆ ಶಿಲಾ ತಪಸ್ಸು. ಶಕುಂತಳೆಯ ತಪಸ್ಸಿನಲ್ಲಿರುವಂತೆ ಕುಮಾರನ ಕಣ್ಬೆಳಕಿನ ತಂಪಿಲ್ಲ, ವಾಸವದತ್ತೆಯ ತಪಸ್ಸಿನಲ್ಲಿರುವಂತೆ ಪತಿಯ ಸಾಮಿಪ್ಯದ ಅಲಂಪಿಲ್ಲ. ಶಕುಂತಳೆಯ

ಕಷ್ಟದ ಕಾರ್ಮೋಡಕ್ಕೆ, ಸಂತಾನ ವಾತ್ಸಲ್ಯದ ಮಿಂಚಿನಂತಿದೆ. ವಾಸವದತ್ತೆಯ ಸಂಕಟದ ಸಮೀಪದಲ್ಲಿಯೆ ವೆಂಕಟರಮಣನಿದ್ದಾನೆ. ಆದೃಷ್ಟಿಯಿಂದ ನೋಡಿದರೆ ಊರ್ಮಿಳೆಯ ತಪಸ್ಸು ಅತ್ಯಗತ್ಯವೂ ಅಸಹನೀಯವೂ ಆಗಿ ತೋರುತ್ತದೆ"[2] ಊರ್ಮಿಳೆಯು ಇವರೆಲ್ಲರಿಗಿಂತ ಭಿನ್ನ. ಯಾವುದೇ ಸ್ವಾರ್ಥವಿಲ್ಲದೆ ತನ್ನ ಮನೆತನದ ಶ್ರೇಯಸ್ಸಿಗಾಗಿ ತಪಸ್ಸನ್ನು ಆಚರಿಸಿದಳು . ಲಕ್ಷ್ಮಣ, ರಾಮ, ಸೀತೆ ಹಾಗೂ ಇಡೀ ಅಯೋಧ್ಯಾನಗರಿಯ ಒಳಿತಿನ ಆಶಯವನ್ನು ಒಳಗೊಂಡ ಮಹಾನ್ ತಪಸ್ಸು ಅವಳದು.

'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ ಊರ್ಮಿಳೆಯ ಪ್ರಥಮ ದರ್ಶನವಾಗುವುದು ಸೀತೆಯ ದುಃಖಭಾಗಿನಿಯಾಗಿ. ರಾಮ ಲಕ್ಷ್ಮಣರಿಬ್ಬರು ವಿಶ್ವಾಮಿತ್ರ ಮಹರ್ಷಿಯ ಜೊತೆ ವಿದೇಹಕ್ಕೆ ಬಂದಾಗ ಅಲ್ಲಿನ ಹೂದೋಟದಲ್ಲಿ ಸೀತೆ ಕನಸಿನಲ್ಲಿ ನಿತ್ಯ ಕಾಣುತ್ತಿದ್ದ ನೀಲಮೇಘ ಶ್ಯಾಮನ ಮೂರ್ತಿಯ ಪ್ರತ್ಯಕ್ಷ ದರ್ಶನವೆಂಬಂತೆ ರಾಮನನ್ನು ಕಾಣುತ್ತಾಳೆ. ನಂತರ ಅರಮನೆಗೆ ಬಂದಾಗ ಒಂದು ರೀತಿಯ ದುಃಖದಲ್ಲಿ ಮುಳುಗುತ್ತಾಳೆ. ಆಗ ತನ್ನ ಅಕ್ಕನನ್ನು ತಬ್ಬಿ ಸಂತೈಸುವಲ್ಲಿ ಊರ್ಮಿಳೆಯ ಆಗಮನವಾಗುತ್ತದೆ. ಅವಳ ಮಾತು ಇನ್ನೊಬ್ಬರ ಮರುಕವನ್ನು ಕಡಿಮೆಮಾಡುವ ಉದ್ದೇಶವನ್ನು ಹೊಂದಿದ್ದಾಗಿದೆ. ಹೀಗೆ ಕುವೆಂಪುರವರು ಇನ್ನೊಬ್ಬರ ದುಃಖವನ್ನು ಕಳೆಯುವುದಕ್ಕೆಂದೇ ಊರ್ಮಿಳೆಯ ಜನ್ಮದ ಉದ್ದೇಶವಾಗಿದೆ ಎಂಬುದನ್ನು ಅರ್ಥಪೂರ್ಣವಾಗಿ ಧ್ವನಿತವಾಗುವ ಹಾಗೆ ಚಿತ್ರಿಸಿದ್ದಾರೆ. ಸೀತೆ ಹಾಗೂ ಊರ್ಮಿಳೆ ಇವರಿಬ್ಬರ ಸಂಬಂಧದಲ್ಲಿ ಅಕ್ಕರೆ ಪ್ರೀತಿಗಳಿಗಷ್ಟೇ ಸಮಾನತೆಯನ್ನು ಕಾಣುವುದಿಲ್ಲ. ಬದಲಾಗಿ ಸೀತೆ ಒಂದು ರೀತಿ ತಪಸ್ಸಿನಿಂದ ಮಹತ್ವದ ಸ್ಥಾನ ಪಡೆದರೆ, ಊರ್ಮಿಳೆ ಕಾಯುವಿಕೆಯನ್ನೇ ತಪಸ್ಸನ್ನಾಗಿ ಮಾಡಿ ಮೌನ ಸಾಧಕಿಯಾಗಿ ಮೆರೆದಿದ್ದಾಳೆ.



ಅಯೋಧ್ಯೆಯಲ್ಲಿ ರಾಮನಿಗೆ ನಡೆಯಬೇಕಿದ್ದ ಪಟ್ಟಾಭಿಷೇಕ ನಿಂತು ಕಾಡಿಗೆ ಹೋಗುವ ಅನಿರೀಕ್ಷಿತ ಸಂದರ್ಭ ಒದಗಿಬರುತ್ತದೆ. ರಾಮ ಪಿತೃವಾಕ್ಯಪಾಲನೆಗಾಗಿ ವನವಾಸಕ್ಕೆ ಹೊರಡಲು ಸಿದ್ಧನಾಗುತ್ತಾನೆ. ಸೀತೆ ಹಠ ಹಿಡಿದು ರಾಮನನ್ನು ಒಪ್ಪಿಸಿ ಜೊತೆಗೆ ಹೊರಡುತ್ತಾಳೆ. ತಮ್ಮನಾದ ಲಕ್ಷ್ಮಣನೂ ಅಣ್ಣನನ್ನು ಹಿಂಬಾಲಿಸುತ್ತಾನೆ. ಆದರೆ ಅದಕ್ಕೆ ಮೊದಲು ಊರ್ಮಿಳೆಗೆ ಎಲ್ಲ ವಿಷಯವನ್ನು ತಿಳಿಸಿ ಪ್ರೀತಿಯಿಂದ ಬೀಳ್ಕೊಳ್ಳುತ್ತಾನೆ. ವಾಲ್ಮೀಕಿ ರಾಮಾಯಣದಲ್ಲಿ ಊರ್ಮಿಳೆ ಆ ಸಂದರ್ಭದಲ್ಲಿ ನೆನಪಿಗೇ ಬರುವುದಿಲ್ಲ. ಸೀತೆ ರಾಮನನ್ನು ಹಿಂಬಾಲಿಸಿದರೆ ಊರ್ಮಿಳೆ ದೂರದಲ್ಲಿದ್ದುಕೊಂಡೇ ಸರ್ವರ ಏಳಿಗೆಗಾಗಿ, ಪತಿಯ ಪವಿತ್ರ ಉದ್ದೇಶ ಸಾಧನೆಗಾಗಿ ತನ್ನ ಪತಿಯಿಂದ ಸಂತೋಷವಾಗಿ ದೂರದಲ್ಲಿಳಿಯುತ್ತಾಳೆ. ಸೀತೆ, ರಾಮ, ಲಕ್ಷ್ಮಣರು ವನವಾಸಕ್ಕೆ ಹೊರಟ ಮೇಲೆ ಅರಮನೆಯ ಎಲ್ಲ ವೈಭವಗಳನ್ನು ತ್ಯಜಿಸಿ ಸರಯೂ ನದಿಯ ತಿರದಲ್ಲಿ ಪರ್ಣಕುಟಿಯನ್ನು ರಚಿಸಿ ತಪಸ್ವಿನಿಯಾಗಿ ಸಾಧನೆಗೆ ತೊಡಗುತ್ತಾಳೆ.



"ಕಟ್ಟಿದಲ್ ಚಿತ್ತಮೊಮಂಗಳದ ರಕ್ಷೆಯಂ ಮೈಥಿಲಿಗೆ ರಾಮಂಗೆ ಮೇಣ್ ತನ್ನಿನಿಯ ದೇವನಿಗೆ"[3] ಹೀಗೆ ಹದಿನಾಲ್ಕು ವರ್ಷ ದೃಢನಿಷ್ಠೆಯಿಂದ ಕಾಯುವ ಅವಳ ವ್ರತಕ್ಕಾಗಿ ಮನಸ್ಸಿನ ತಪೋರಂಗವನ್ನು ಅವಳು ಮಾನಸಿಕವಾಗಿ

ಸಿದ್ಧಪಡಿಸಿಕೊಳ್ಳುತ್ತಾಳೆ. ಅದು ರಾಮಲಕ್ಷ್ಮಣ, ಸೀತೆ ಇವರ ಯಶಸ್ಸನ್ನು ಕುರಿತದ್ದೇ ಅಲ್ಲ. ಇಡೀ ಕುಟುಂಬದಲ್ಲಿ ಬಿರುಗಾಳಿಯಂತೆ ಬಂದು ಎರಗಿದ್ದ ಅಶಾಂತಿಯನ್ನು ಹೋಗಲಾಡಿಸುವುದಕ್ಕೆ. ಅವಳ ಈ ಮೂಕವ್ರತವೇ ಸರ್ವರ ರಕ್ಷೆಯಾಯಿತು ಎಂದು ಕುವೆಂಪುರವರು ಹೇಳುತ್ತಾರೆ. ರಾಮನ ಪ್ರೇರಕ ಶಕ್ತಿಯಾಗಿ ಸೀತೆ ನಿಂತರೆ, ಲಕ್ಷ್ಮಣನಿಗೆ ಸ್ಫೂರ್ತಿಯಾಗಿ ಊರ್ಮಿಳೆ ನಿಲ್ಲುತ್ತಾಳೆ.

ಕುವೆಂಪುರವರು ತಮ್ಮ ವ್ಯಕ್ತಿತ್ವದ ನಿರ್ಮಾಣದಲ್ಲಿ ಪ್ರಧಾನ ಪಾತ್ರವಹಿಸಿದವಳು ಊರ್ಮಿಳೆ ಎಂಬುದನ್ನು ಕವನದಲ್ಲಿ ಹೀಗೆ ಹೇಳಿದ್ದಾರೆ :

*"ರಾಮಾಯಣದ ಮಹಾರತ್ನ ವೇದಿಕೆಯ ಮೇಲೆ*
*ಮೂಲೆಯ, ನಿಂತಿರುವುದೊಂದಮೃತ, ಶಿಲ್ಪಕೃತಿ*
*ನಾಣ್ಚಿ ; ಕಾಣದೆ ಸಂತೆಗಣ್ಣಳಿಗೆ; ಪೂರ್ತಿ ಸತಿ,*
*ಊರ್ಮಿಳಾದೇವಿ, ಲಕ್ಷ್ಮಣ ಚಿರ ತಪಶ್ಶೀಲೆ!*
*ತ್ರೈಭುವನ ವಂದಿತ ಬೃಹನ್ಮೂರ್ತಿಗಳ ಛಾಯೆ*
*ಮುಚ್ಚಿ ಮರೆಸಿದೆ ನಿನ್ನ ನೆಲೆ ಸಾಧ್ವಿ; ಅದರಿಂದೆ*
*ಈ ಮಂದಿ ಹೂವು ಹಣ್ಣಳ ಪೂಜೆಯನು ಮುಂದೆ*
*ಕಣ್ ಸೆಳೆವ ಜಸತೀಯುತಿದೆ, ಕೀರ್ತಿಯಾ ಮಾಯೆ,*
*ಪೊನ್ನ ಪೊಳಪೊಲ್, ಸುಲಭವೇದ್ಯ; ಮಹಿಮಾಜ್ಯೋತಿ*
*ಸಂಯಮದ ಸಂಪತ್ತಿನೊಲ್, ಸಂಸ್ಕೃತಿಗೆ ಮಾತ್ರ*
*ಗೋಚರಂ – ಹನುಮಂತ ರಾಮ ಲಕ್ಷ್ಮಣ ಸೀತೆ*
*ಕೈ ಕೊಳಲಿ ಜನ ಪೂಜೆಯಂ; ನಿನಗೆ ಸಂಪ್ರೀತಿ*
*ನನ್ನದಿದೆಕೋ, ಜನನಿಃ ನನ್ನ ಜೀವನ ನೇತ್ರ*
*ನಿನ್ನ ಬಾಳಂತಿರ್ಕೆ, ಹೇ ಗೋಚರಾತೀತೆ"*[4]

ಈ ಕವನದಲ್ಲಿ ಹೆಣ್ಣಿನ ಬಗ್ಗೆ ತಮಗಿರುವ ಸ್ತ್ರೀವಾತ್ಸಲ್ಯವನ್ನು ಸ್ತ್ರೀ ಸಂವೇದನೆಯನ್ನು ಕುವೆಂಪುರವರು ಅತ್ಯಂತ ಮನೋಜ್ಞವಾಗಿ ಅಭಿವ್ಯಕ್ತಿಸಿದ್ದಾರೆ. "ಇದು ಆಡಂಬರದ ಮಾತಲ್ಲ; ವ್ಯವಹಾರಿತವಾದದ್ದೂ ಅಲ್ಲ; ಹೆಣ್ಣಿನಲ್ಲಿರುವ ಔನತ್ಯವನ್ನು ಕಂಡುಕೊಂಡ ಬಗೆ ಇದು. ಹೆಣ್ಣನ್ನು ಗ್ರಹಿಸುವ ರೀತಿ; ಸ್ಥಾನನಿರ್ದೇಶನದ ಸೂಚಕ"[5] ಎಂದು ಪ್ರೊ॥ ಪದ್ಮಾಶೇಖರ್‌ರವರು ಬಣ್ಣಿಸುತ್ತಾರೆ.

ಕುವೆಂಪುರವರು 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದಲ್ಲಿ ಒಂದು ಸಂಚಿಕೆಗೆ 'ಊರ್ಮಿಳಾ' ಎಂಬ ಹೆಸರನ್ನೇ ಇಟ್ಟಿದ್ದಾರೆ. ಆದರೆ ಅಲ್ಲಿ ಆಕೆ ಎಲ್ಲೂ ಗೋಚರಳಾಗುವುದಿಲ್ಲ. ಅಗೋಚರವಾಗಿದ್ದುಕೊಂಡೇ ತನ್ನ ವ್ಯಕ್ತಿತ್ವವನ್ನು ಎಲ್ಲರ ಗಮನಕ್ಕೆ ತರುತ್ತಾಳೆ, ಹಾಗೂ ಗುಪ್ತಗಾಮಿನಿಯಾಗಿ ಹರಿಯುತ್ತಾಳೆ. ಊರ್ಮಿಳೆಯ ಅಗೋಚರ ವ್ಯಕ್ತಿತ್ವದ ಪರಿಣಾಮವನ್ನು ಅತ್ಯಂತ ಶಕ್ತಿಯುತವಾಗಿ ಮನಸ್ಸಿಗೆ ಹತ್ತಿರವಾಗುವಂತೆ ಆಕೆಯ ಗುಣವರ್ಣನೆಗಾಗಿ ಒಂದು ಭಾಗವನ್ನೇ ಮೀಸಲಿರಿಸಿದ್ದಾರೆ:

*"ನೀರವ ಧ್ಯಾನವಧೂ ಹೇ ಊರ್ಮಿಳಾದೇವಿ,*
*ಸೌಮಿತ್ರಿಯರ್ಧಾಂಗಿ, ಹೇಳು ನೀನೆಲ್ಲಿದ್ದೆ*
*ಕಡಲ ಕಡಲೋಲಯೋಧ್ಯಾನಗರಿ ಮಸಗಿದಾ*
*ಕ್ರಾಂತಿ ದಿನದಂದು? ನಿನ್ನರ್ದೆಪೂವಿನಾ ವೇಧೆ*
*ಜಗಳ್ಪುದಿಲ್ಲವೆ ತುಳ್ಕಿ ನೇತ್ರ ಶತಪತ್ರದಿಂ?*

*ಪೆಣ್ತನಂ ತಾನೆ ನೀನಲ್ಲದೂರ್ಮಿಳೆಯಲ್ತು;*
*ಪೆಣ್ಣೆಂಬ ತಪಕೆ ನೀಂ ನಿರುಪಮ ಪ್ರತಿಮೆಯೌ!"6*

ಹೀಗೆ ಊರ್ಮಿಳೆಯ ವ್ಯಕ್ತಿತ್ವ ಹಾಗೂ ಅವಳ ದಿಟ್ಟ ಮೌನವ್ರತಕ್ಕೆ ಸಾಟಿಯಾದ ಉಪಮೆಯೇ ಇಲ್ಲವೆನ್ನುತ್ತಾರೆ.

ವಾಲ್ಮೀಕಿ ರಾಮಾಯಣದಲ್ಲಿ ರಾಮಸೀತೆಯರ ದಾಂಪತ್ಯವನ್ನು ಕೊಟ್ಟಂತೆ ಊರ್ಮಿಳಾ ಲಕ್ಷ್ಮಣರ ದಾಂಪತ್ಯ ಚಿತ್ರಣವನ್ನು ಕೊಡುವುದಿಲ್ಲ. ಆದರೆ ಕುವೆಂಪುರವರು ರಾಮ, ಸೀತೆ, ಲಕ್ಷ್ಮಣರು ವನವಾಸದಲ್ಲಿದ್ದರೂ ಊರ್ಮಿಳೆಯನ್ನು ನೆನೆಯದೆ ಇರಲಿಲ್ಲ. ಒಮ್ಮೊಮ್ಮೆ ರಾಮ ಸೀತೆಯರು ಊರ್ಮಿಳೆಯನ್ನು ನೆನೆದರೆ ಲಕ್ಷ್ಮಣ ತನ್ನ ಕಷ್ಟ ಸಮಯಗಳಲ್ಲಿ ಹಾಗೂ ತನಗೆ ಸಮಯ ಪರೀಕ್ಷೆ ಬಂದಾಗ ಸಂದರ್ಭಗಳಲ್ಲಿ ನೆನೆಯುತ್ತಿದ್ದುದು ಊರ್ಮಿಳೆಯನ್ನೇ. ವನವಾಸದ ಸಂದರ್ಭಗಳಲ್ಲಿ ಅವನಿಗೆ ಚೈತನ್ಯವನ್ನು ತುಂಬುತ್ತಿದ್ದುದು ಊರ್ಮಿಳೆಯ ನೆನಪೇ ಆಗಿತ್ತು.

ಚಿತ್ರಕೂಟದಲ್ಲಿ ಒಂದು ದಿನ ರಾಮನು ತನ್ನ ಬದುಕಿಗೆ ಊರುಗೋಲಾಗಿ ನಿಂತಿರುವವರನ್ನು ಸ್ಮರಿಸುತ್ತಿರುತ್ತಾನೆ. ಆ ಸಮಯದಲ್ಲಿ ಕಾಡಿನ ಭಯಂಕರ ಕ್ರೂರಮೃಗಗಳ ಸದ್ದಿಗೆ ಸೀತೆ ರಾಮನ ಸನಿಹದಲ್ಲಿದ್ದರೂ ಬೆಚ್ಚುತ್ತಿರುತ್ತಾಳೆ. ಆಗ ಲಕ್ಷ್ಮಣ ರಾಮರ ನೆನಪಿಗೆ ಬರುವುದು ಊರ್ಮಿಳೆಯೇ. ಪತಿಯ ಸಾಮಿಪ್ಯದಲ್ಲಿದ್ದ ಸೀತೆಯೇ ಹೀಗೆ ಹೆದರುವಾಗ ಪತಿಯಿಂದ ದೂರವಿರುವ ಊರ್ಮಿಳೆಯ ಸ್ಥಿತಿ ಹೇಗಿರಬಹುದೆಂದು ರಾಮನು ಜ್ಞಾಪಕಕ್ಕೆ ತಂದುಕೊಳ್ಳುತ್ತಾನೆ. ನಡುರಾತ್ರಿಯಲ್ಲಿಯೇ ಲಕ್ಷ್ಮಣನನ್ನು ಎಬ್ಬಿಸಿ ನೀನು ಈ ಕೂಡಲೇ ಅಯೋಧ್ಯೆಗೆ ಹಿಂತಿರುಗು ಎಂದು ಹೇಳುತ್ತಾನೆ. ಆಗ ಲಕ್ಷ್ಮಣನು, ಊರ್ಮಿಳೆ ತಪಸ್ವಿನಿ, ನಾನು ಆಕೆಯ ಅನುಮತಿಯನ್ನು ಪಡೆದೇ ಬಂದಿರುವೆನು. ಆ ಚಿಂತೆ ಬೇಡವೆಂದು ಹೇಳುತ್ತಾನೆ. ಲಕ್ಷ್ಮಣನ ಉತ್ತರವು ಅವರಿಬ್ಬರ ಪವಿತ್ರ ಸಂಬಂಧ ಮತ್ತು ತ್ಯಾಗ ಮನೋಭಾವವನ್ನು ತೋರಿಸುತ್ತದೆ. ಊರ್ಮಿಳೆ ತನ್ನ ವೈಯಕ್ತಿಕ ಸುಖಕ್ಕಿಂತ ಪುರುಷನಾದ ರಾಮ–ಲಕ್ಷ್ಮಣರ ಕಾರ್ಯ ಸಾಧನೆಗೆ ನಿಸ್ವಾರ್ಥ ತಪಸ್ಸನ್ನು ಆಚರಿಸುತ್ತಿರುತ್ತಾಳೆ. ಲಕ್ಷ್ಮಣನ ಮನಸ್ಸು ಸತತವಾಗಿ ಊರ್ಮಿಳೆಯನ್ನು ನೆನೆಯುತ್ತಿತ್ತು. ಆದರೆ ಸಾಂಸಾರಿಕ ಸುಖಕ್ಕಿಂತ ಮಹತ್ ಸಾಧನೆಗಾಗಿ ತನ್ನನ್ನು ತಾನು ಆ ಕಾರ್ಯ ಸಾಧನೆಗಾಗಿ ಅರ್ಪಿಸಿಕೊಂಡಿದ್ದನು. ಇದರ ಯಶಸ್ವಿಗೆ ಊರ್ಮಿಳೆಯ ತಪವೇ ಅಡಿಗಲ್ಲು ಎಂಬುದನ್ನು ಲಕ್ಷ್ಮಣ ಬಲ್ಲವನಾಗಿದ್ದನು. ಲಕ್ಷ್ಮಣ ಹಾಗು ಊರ್ಮಿಳೆಯರ ನಡುವಿನ ಸಾಮರಸ್ಯವನ್ನು ತೋರುವ ಲಕ್ಷ್ಮಣನ ಮಾತುಗಳು ಈ ಕಾವ್ಯದಲ್ಲಿ ಮಹತ್ವವನ್ನು ಪಡೆದಿವೆ.

ಶ್ರೀರಾಮನಲ್ಲದೆ ಸೀತೆಯೂ ಊರ್ಮಿಳೆಯನ್ನು ನೆನೆಯದೆ ಇರಲಿಲ್ಲ. ಒಬ್ಬ ಮಹಾ ತಪಸ್ವಿನಿ ಇನ್ನೊಬ್ಬ ತಪಸ್ವಿನಿಯನ್ನು ಕುರಿತು ಚಿಂತಿಸುವುದು ಸ್ತ್ರೀ ಪರವಾದ ಸ್ತ್ರೀ ಸಂವೇದನೆಗೆ ಹಿಡಿದ ಕನ್ನಡಿಯಾಗಿದೆ. ಒಂದು ಕಲ್ಲು ಚಿತ್ರಕೂಟದಲ್ಲಿ ಶತಮಾನಗಳಿಂದ ಬಿದ್ದಿರುತ್ತದೆ. ಆ ಕಲ್ಲನ್ನು ಸೀತೆ ತದೇಕ ಚಿತ್ತದಿಂದ ನೋಡಿದಾಗ ಅದಕ್ಕೆ ಆಕೃತಿ ಬಂದಂತಾಗುತ್ತದೆ. ಸೀತೆ ರಾಮನನ್ನು ಕರೆದು ಅದನ್ನು ತೋರಿಸಿದಾಗ ಅವನೂ ಆಶ್ಚರ್ಯ ವ್ಯಕ್ತಪಡಿಸುತ್ತಾನೆ. ಅಂದಿನಿಂದ ಆ ಕಲ್ಲಿಗೆ 'ಕಲ್ಪವಸಿ' ಎಂದು ಹೆಸರನ್ನು ಇಡುತ್ತಾರೆ.

ಇನ್ನೊಮ್ಮೆ ಬೈಗುಗಪ್ಪಿನಲ್ಲಿ ಆ ಕಲ್ಪವಸಿಯ ಮೇಲೆ ಯಾರನ್ನೋ ಕಂಡಂತಾಗಿ ಸೀತೆ ಕೂಗಿಕೊಂಡು ರಾಮನಿಗೆ ತೋರಿಸುತ್ತಾಳೆ. ಆಗ ಅವರಿಬ್ಬರು ಒಂದೇ ಸಮನೆ ದಿಟ್ಟಿಸಿ ನೋಡಿದಾಗ ಅವರಿಗೆ ಅರಿವಿಗೆ ಬುರುವುದು ಊರ್ಮಿಳೆಯ ಚಿತ್ರವೇ:

*"ಸೌದೆಯಂಪೊತ್ತು ತಂದಲ್ಲಿ ವಿಶ್ರಮಿಸಿರ್ದನಾ*
*ಊರ್ಮಿಳಾವಲ್ಲಭನ್ನೆಸೆ ! ನೆನೆದಾಕೆಯಂ*
*ಬೇಯುತಿರುವನೆ? ಬೇಡುವನೆ ದೇವರಂ ತನ್ನ*
*ಸತಿಗಾಗಿ? ಸುಯ್ದರ್ ಕೃತಜ್ಞತಾಭಾರದಿಂ*
*ದಂಪತಿಗಳರ್ವರಂ, ಮಾತನುಳಿದಳ್ ಸೀತೆ"* [7]

ಹೀಗೆ ತನ್ನ ತಂಗಿಯ ಅನುಪಮ ತ್ಯಾಗದ ನೆನಪಿನಿಂದಾಗ ಸೀತೆ ಕೃತಜ್ಞತಾ ಮೌನವನ್ನು ಅನುಭವಿಸುತ್ತಾಳೆ. ಆ ಕಲ್ಪವಸಿಯು ಊರ್ಮಿಳೆಯ ತಪಶ್ಯಕ್ತಿಗೆ ಹಾಗೂ ಅವಳ ಸಂಯಮಕ್ಕೆ ಪ್ರತಿಮೆಯಾಗಿ ನಿಂತಂತೆ ಕಾಣುತ್ತದೆ. ಇಂಥದೊಂದು ಸಾಮಾನ್ಯ ಘಟನೆಯ ಮೂಲಕ ಊರ್ಮಿಳಾದೇವಿಯ ಚಾರಿತ್ರ್ಯವನ್ನು ಅವಳ ತಪಸ್ಸಿನ ಮಹಿಮೆಯನ್ನು ಹಾಗೂ ಅವಳ ಬಗೆಗಿನ ಲಕ್ಷ್ಮಣನ ಅಸೀಮ ಪ್ರೇಮವನ್ನು ಕುವೆಂಪು ಅತ್ಯಂತ ಮನೋಜ್ಞವಾಗಿ ಚಿತ್ರಿಸಿದ್ದಾರೆ.

ಒಮ್ಮೆ ಸೀತೆಯು ಒಲೆಯನ್ನು ಹತ್ತಿಸಲು ಪ್ರಯತ್ನಪಡುತ್ತಿರುತ್ತಾಳೆ. ಆದರೆ ಹಸಿಸೌದೆಯಾದ್ದರಿಂದ ಒಲೆ ಹತ್ತುತ್ತಿರಲಿಲ್ಲ. ಅತ್ತಿಗೆಯ ಸಂಕಟವನ್ನು ನೋಡಿ ಲಕ್ಷ್ಮಣನು ಸಹಾಯ ಮಾಡಲು ಬರುತ್ತಾನೆ. ಊರ್ಮಿಳೆಯನ್ನು ನೆನೆದು ಊದಿದಾಗ ಹಸಿ ಸೌದೆಯು ಧಗ್ಗನೆ ಹೊತ್ತಿಕೊಳ್ಳುತ್ತದೆ. ಇದು ಊರ್ಮಿಳೆಯ ತಪಸ್ ಶಕ್ತಿಯ ಪ್ರಭಾವವನ್ನು ಸೂಚಿಸುತ್ತದೆ. ಅಷ್ಟಲ್ಲದೆ ಊರ್ಮಿಳೆಯ ತಪಸ್ ಶಕ್ತಿಯ ಬಗೆಗೆ ಲಕ್ಷ್ಮಣನಿಗೆ ಇರುವ ಗೌರವ ಹಾಗೂ ಆತ್ಮವಿಶ್ವಾಸವನ್ನು ಸಂಕೇತಿಸುತ್ತದೆ.

ಹೇಮಂತ ಋತುವಿನಲ್ಲೊಮ್ಮೆ ಬಿದುರು ಮೆಳೆಯ ತುದಿಗಣೆಯಲ್ಲಿ ಕುಳಿತಿದ್ದ ಕಾಮಳ್ಳಿಗಳ ಹಿಂಡು ಹಾರಿ ಹೋಗುತ್ತವೆ. ಅಲ್ಲಿಂದ ಹನಿಹನಿಯಾಗಿ ಬಿದ್ದ ಹಿಮವು ಸೀತೆಯ ಮಡಿಲನ್ನು ಸೇರುತ್ತವೆ. ಇದನ್ನು ಕಂಡ ಲಕ್ಷ್ಮಣನು ಅರಣ್ಯ ಸಖಿಯು ದೇವಿಗೆ ಅಭಿನಂದಿಸುತ್ತಿರುವಳೆಂದು ಹಾಸ್ಯ ಮಾಡುತ್ತಾನೆ. ಆಗ ಸೀತೆಯು ಹನಿಹನಿಯಾಗಿ ಬಿದ್ದ ಹಿಮವಲ್ಲ ಅವು – ಊರ್ಮಿಳೆಯ ಕಣ್ಣೀರು. ಮುಂದೆ ಲಕ್ಷ್ಮಣನಿಗೆ ಬರುವ ಸೊಗಕ್ಕೆ ಮುಂಗಾಣ್ಕೆಯನ್ನು ಅರ್ಪಿಸುತ್ತಿವೆ ಎಂದು ಹೇಳುತ್ತಾಳೆ. ಈ ಮಾತುಗಳಿಂದ ಸೀತೆಯು ಊರ್ಮಿಳೆಯ ಮೇಲಿಟ್ಟಿದ್ದ ವಾತ್ಸಲ್ಯ, ಅಭಿಮಾನಗಳನ್ನು ಧ್ವನಿಸುತ್ತವೆ.

ಮಹಾಸಂಗ್ರಾಮ ಆರಂಭವಾಗುವ ಹಿಂದಿನ ರಾತ್ರಿ ಬಾನಬಟ್ಟೆಯಲ್ಲಿ ವೇಗವಾಗಿ ಸಾಗುತ್ತಿದ್ದ ತಪೋಲಕ್ಷ್ಮಿಯನ್ನು ನಭೋಲಕ್ಷ್ಮಿ ಪ್ರಶ್ನಿಸುತ್ತಾಳೆ. ಆಗ ತಪೋಲಕ್ಷ್ಮಿ ಕೊಡುವ ಉತ್ತರ ಊರ್ಮಿಳೆಯ ಘನ ವ್ಯಕ್ತಿತ್ವಕ್ಕೆ ಕನ್ನಡಿ ಹಿಡಿದಂತಿದೆ. ಆಕೆಯು ಕೊಡುವ ಉತ್ತರ ಹೀಗಿದೆ

*"ಅಯೋಧ್ಯಾ ಪ್ರದಕ್ಷಿಣಂಗೆಯ್ದೆನ್*
*ಚಿತ್ರಕೂಟಾದ್ರಿಯಂ, ದಂಡಕಾರಣ್ಯಮಂ,*
*ಪಂಚವಟಿಯಂ ಮತ್ತೆ ಕಿಷ್ಕಿಂದೆಯಂ ಸುತ್ತಿ*
*ಬಂದೆನಿತ್ತಣ್ಗೆ, ಮೇಣ್ ಊರ್ಮಿಳಾ ಪ್ರಾಣಂಗೆ*

*ತಾಯ್ವರಕೆಯಂ, ತಮ್ಮ ನರಕೆಯಂ, ಮೇಣ್ ಸತಿಯ*
*ಮೇರು ಕಂಪನಕಾರಿ ಸುವ್ರತದ ಋತಶಕ್ತಿಯಂ*
*ಪೊತ್ತುಪೋದಪೆನಕ್ಕ, ರಕ್ಕಸರ ಕೊಂದಕ್ಕನಂ*
*ಪೊರೆದು ಬೇಗನೆ ಮನೆಗೆ ಬಪ್ಪ ಶುಭಮಪ್ಪವೋಲ್"*

ಸೀತೆಯ ಬಂಧನ ಮುಕ್ತ ಹಾಗೂ ರಾಮನ ವಿಜಯಕ್ಕೆ ಅವರ ಶಕ್ತಿಯಷ್ಟೇ ಅಲ್ಲದೆ ಊರ್ಮಿಳೆಯ ತಪಸ್ಸು ಕೂಡ ಕಾರಣವಾಗಿದೆ ಎಂಬುದನ್ನು ಈ ಪ್ರಸಂಗವು ಧ್ವನಿಸುತ್ತದೆ. ಊರ್ಮಿಳೆಯ ತಪಸ್ಸನ್ನು ಮೆಚ್ಚಿದ ಪಾರ್ವತಿಯೇ ಶಿವನನ್ನು ಬೇಡುತ್ತಾಳೆ. 'ಮಗಳೂರ್ಮಿಳೆಗೆ ಮುಡಿದ ಹೂ ಬಾಡದಿರಲಿ' ಎಂದು ಅವಳ ಮಾಂಗಲ್ಯವನ್ನು ಬೇಡುತ್ತಾಳೆ. ಮಹಾನ್ ಪತಿವ್ರತೆಯಾದ ಪಾರ್ವತಿಯೇ ಸ್ವತಃ ಊರ್ಮಿಳೆಯ ಒಳಿತನ್ನು ಬಯಸುವುದು ಊರ್ಮಿಳೆಯ ಮನಃಶಕ್ತಿ ಹಾಗೂ ಅವಳ ವ್ರತಕ್ಕೆ ಸಂದ ಗೌರವ ಕೂಡ ಆಗಿದೆ.

ರಾವಣನ ಮಗನಾದ ಅತಿಶಯನು ತನ್ನ ಮಾಯಾಬಲ ಸಿದ್ಧಿಯಿಂದ ಒಂದು ಯಾಗಶಾಲೆಯನ್ನು ನಿರ್ಮಿಸುತ್ತಾನೆ. ಲಕ್ಷ್ಮಣನು ಅದನ್ನು ಪ್ರವೇಶಿಸಿದೊಡನೆ ಶವದಂತೆ ಧರೆಗೆ ಉರುಳುತ್ತಾರೆ. ಸುಷೇಣನ ಸೂಚಿಸಿದಂತೆ ಹನುಮಂತನು ಸಂಜೀವಿನಿಯನ್ನು ತರುತ್ತಾನೆ. ಸಂಜೀವಿನಿಯ ಪ್ರಯೋಗದಿಂದ ಮತ್ತೆ ಜೀವಗೊಂಡ ಲಕ್ಷ್ಮಣ ತನಗೆ ಎಚ್ಚರವಾದೊಡನೆ ಕರೆಯುವುದು 'ಊರ್ಮಿಳಾ ಊರ್ಮಿಳಾ' ಎಂದು. ಆಕೆಯನ್ನು ತನ್ನ ಸುತ್ತಮುತ್ತ ಹುಡುಕುತ್ತಾನೆ. ತನಗೆ ಏನಾಗಿತ್ತೆಂಬ ಸ್ಥಿತಿಯನ್ನು ಜಾಂಬವನಿಂದ ತಿಳಿದ ಲಕ್ಷ್ಮಣ ತನಗಾದ ಅನುಭೂತಿಯನ್ನು ಹೀಗೆ ಸ್ಪಷ್ಟಪಡಿಸುತ್ತಾನೆ:

*"ಕಂಡೆನಾಂ, ದಿಟಂ*
*ಮ್ಮುಲವನುಟ್ಟಿರ್ದಳಂ ನನ್ನ ಸತಿಯಂ*
*ತಪಶ್ಚರ್ಯೆಯಿಂ ಪೂಜ್ಯೆಯಾಗಿರ್ದಳುಂ! ತನ್ನ*
*ದಿವ್ಯಶಕ್ತಿಯೊಳೆನ್ನ ಹೃದಯಕಮೃತವ ನೆರೆದು,*
*ಮೇಘನಾದಾಭಿಚಾರಿಕ ಯಾಗಕೆನ್ನಾಯು*
*ತವಿಯದಂದದಿ ತೊಡಿಸಿದಳ್ ತಪಃಕವಚಮಂ*
*ಪೂಜ್ಯೆಯಂ ಪ್ರಾಣವಲ್ಲಭೆಯಾಗಿ ಪಡೆದ ನಾಂ*
*ಧನ್ಯನೈಸಲೆ ಧನ್ಯದೊಳ್ !"*

ಅಂದರೆ ತನ್ನ ಹೆಂಡತಿಯ ತಪಸ್‌ಶಕ್ತಿಯಿಂದ ತನ್ನ ಪ್ರಾಣ ಉಳಿಯಿತು. ಆಕೆಗೆ ನಾನು ಧನ್ಯ ಎಂದು ಉಚ್ಚರಿಸುತ್ತಾನೆ. ಊರ್ಮಿಳೆ ಲಕ್ಷ್ಮಣನ ಬಳಿ ಇಲ್ಲ. ಆದರೆ ಆಕೆಯ ತಪಸ್ಸು ರಕ್ಷಾ ಕವಚವಾಗಿ ಲಕ್ಷ್ಮಣನನ್ನು ಮೃತ್ಯುವಿನಿಂದ ಪಾರು ಮಾಡುತ್ತದೆ. ಇದು ಕನಸಿನ ರೂಪ ಪಡೆದು ಲಕ್ಷ್ಮಣನಿಗೆ ಸಂಕೇತಿಸುತ್ತದೆ. ಹೀಗೆ ರಾಮ, ಲಕ್ಷ್ಮಣ ಸೀತೆಯರು ವನವಾಸದ ಸಂದರ್ಭದಲ್ಲೂ ಊರ್ಮಿಳೆಯನ್ನು ನೆನೆದು ಅವಳ ಮಹತ್ತನ್ನು ಕೊಂಡಾಡುತ್ತಾರೆ. ಊರ್ಮಿಳೆ ಅವರ ಸಮೀಪದಲ್ಲಿರದಿದ್ದರೂ, ನೇರವಾಗಿ ಏನು ಮಾಡದಂತೆ ಕಂಡರೂ ಅವರೆಲ್ಲರಿಗೂ ತನ್ನ ತಪಸ್ಸಿನಿಂದ ಸುರಕ್ಷಿತರನ್ನಾಗಿರಿಸಿದ್ದಳು. ಇಲ್ಲೆಲ್ಲಾ ಕುವೆಂಪುರವರು ಸ್ತ್ರೀಶಕ್ತಿ ಹಾಗೂ ಆಧ್ಯಾತ್ಮಿಕ ಶಕ್ತಿಯನ್ನು ಪುನರ್ ಸ್ಥಾಪಿಸುವ ಪ್ರಯತ್ನ ಮಾಡಿದ್ದಾರೆ.

ಇಕ್ಷ್ವಾಕು ವಂಶದ ಹಿರಿಯ ಮಗ ಸೊಸೆ ಎನಿಸಿದ ರಾಮ ಸೀತೆಯರು ವನವಾಸಕ್ಕೆ ಹೊರಟಾಗ ಲಕ್ಷ್ಮಣನೂ ಅವರನ್ನು ಹಿಂಬಾಲಿಸುತ್ತಾನೆ. ಆಗ ಅವನ ಹೆಂಡತಿಯಾಗಿ ಅಂದರೆ ಎರಡನೆ ಸೊಸೆಯಾಗಿ ತನ್ನ ಜವಾಬ್ದಾರಿಗಳನ್ನೆಲ್ಲ ನೋಡಿಕೊಳ್ಳಬೇಕಾದವಳು ಊರ್ಮಿಳೆ ಈ ಕೆಲಸವನ್ನು ನಿರ್ವಹಿಸಿದವಳು ಊರ್ಮಿಳೆ. ವಿಜಯಿಗಳಾಗಿ ಸೀತಾ ರಾಮರ ಲಕ್ಷ್ಮಣರು ಬರುತ್ತಾರೆಂದು ಮಾಂಡವಿಯು ಊರ್ಮಿಳೆಗೆ ಶುಭ ಸುದ್ದಿಯನ್ನು ಮುಟ್ಟಿಸುತ್ತಾಳೆ. ಅವರನ್ನು ಸ್ವಾಗತಿಸುವುದಕ್ಕಾಗಿ ಆತುರಪಡಿಸುತ್ತಾಳೆ. ಆಗ ಊರ್ಮಿಳೆ ಕೊಟ್ಟ ಉತ್ತರವೆಂದರೆ :

*"ಮೀಯದುಡೆದೆಯೆ ತೊಡದೆ ಪೋಪುದೇನವರೆಡೆಗೆ.*
*ತಂಗೆ, ಮಂಗಳಮಲ್ತು!"*
*"ನೋಡಬಾರದು ಅವರ್*
*ನಿನ್ನ ನಿಡು ಕಡುನೋಂಪಿಯಂ?"*
*"ಏನಿಗೇಂ ಪ್ರದರ್ಶನ? ತಪಕ್ಕದಿರ್*
*ನಮ್ಮದೊರ್ ತೃಣಮಲ್ತೆ! ಸಂತೋಷ ಸಮಯದೊಳ್*
*ತೋರ್ಪುದನುಚಿತವೆಮ್ಮ ಕಷ್ಟಮಂ! ತನ್ನ ತಾನ್*
*ಇಲ್ಲಗೈವುದೆ ಎಲ್ಲ ಸಾಧನೆಗೆ ಕೊನೆಯದಾರಿ!*
*ಮೇಣ್ ತಪಕೆ ಕೇಳ್, ತಂಗೆ, ಪರಮ ಪ್ರಯೋಜನಂ!"*[20]

ಎಂದು, ರಾಮ ಸೀತೆ ಲಕ್ಷ್ಮಣ ಇವರ ಸಾಧನೆಯೆದುರು ತನ್ನ ತಪಸ್ ಸಾಧನೆಯನ್ನು ಇಲ್ಲವಾಗಿಸಿಕೊಳ್ಳುತ್ತಾಳೆ. ಇದು ಅವಳ ನಿಸ್ವಾರ್ಥ ಶುದ್ಧ ಮನೋಭಿವ್ಯಕ್ತಿಗೆ ಉತ್ತಮ ನಿದರ್ಶನವಾಗಿದೆ. ಊರ್ಮಿಳೆ ಮಿಂದು ಮಡಿಯನ್ನುಟ್ಟುಕೊಂಡು ತನ್ನ ತಪೋ ಭೂಮಿಕೆಗೆ ಅಭಿವಂದಿಸಿ ಪ್ರಕೃತಿ ಶಕ್ತಿಗಳಿಗೆ ಕೃತಜ್ಞತೆಯಿಂದ ನಮಿಸಿ ತವರು ಮನೆಯಿಂದ ಅತ್ತೆಯ ಮನೆಗೆ ಬರುವಂತೆ ವನದೇವತೆಯಿಂದ ಬೀಳ್ಕೊಳುತ್ತಾಳೆ. ಅರಮನೆಗೆ ಬಂದಾಗ ಸುಮಿತ್ರಾದೇವಿ ಸೊಸೆಯನ್ನು ಬಿಗಿದಪ್ಪಿ, ನಿನ್ನ ತಾಳಿಯ ಪುಣ್ಯದಿಂದಲೇ ಕಾಡುಪಾಲಾಗಿದ್ದ ನಮ್ಮ ಕುಲದ ಏಳಿಗೆ ಮತ್ತೆ ಮರಳಿದುದು ಎಂದು ಅಭಿನಂದಿಸುತ್ತಾಳೆ.

ಇದುವರೆಗೂ ಜಗತ್ತನ್ನು ಎದುರಿಸಲಾಗದೆ, ಮುಖ ತೋರಲಾಗದೆ ಪಶ್ಚಾತ್ತಾಪದ ದಾವಾಗ್ನಿಯಲ್ಲಿ ಬೇಯುತ್ತಿದ್ದ ಕೈಕೆಗೆ ಸಮಾಧಾನದ ಮಾತುಗಳನ್ನು ಹೇಳಿ ಅವಳ ಮನಸ್ಸಿಗೆ ಮೊಟ್ಟ ಮೊದಲು ಶಾಂತಿಯನ್ನು ನೀಡಿದವಳು ಈ ಊರ್ಮಿಳೆಯೆ. ಪಾಪಪ್ರಜ್ಞೆಯಿಂದ ಕುಂದಿದ ಕೈಕೆಗೆ ಊರ್ಮಿಳೆ ಹೇಳುವ ಸಾಂತ್ವನದ ಮಾತುಗಳು ಹೀಗಿವೆ:

*"ಅಮ್ಮ, ನಿಮ್ಮ ದುಃಖದ ಮೇರೆಯಂ ನಾನಳೆಯಲಾರೆ;*
*ಚಿಕ್ಕವಳ್, ನಮಗಾಗಿ, ನಿಮ್ಮ ಮಕ್ಕಳಿಗಾಗಿ,*
*ಓಂಕರಿಸದೀಂಟಿ ವೇಳ್ಕಾ ಕಾಳಕೂಟೋಪಮದ*
*ಹೃತ್ತಾಪಮಂ, ತಾಯಿ, ನಿನಗಲ್ಲದಿನ್ನಾರ್ಗೆ, ಪೇಳ್*
*ಸಮಂಥಿತ ದಶರತ ತನೂಜ ಜೀವಿತ ತಥಾ*
*ಸಾಗರೋತ್ಥಿತ ಘೋರ ಗರಳಮಂ ಧರಿಸುವ*
*ಶಿವಾಶಿವಶ್ರೀ ಶಕ್ತಿ? ಆಶೀರ್ವದಿಸು,*
*ಏಳು, ಬಾರಮ್ಮ; ನೇಸರ್ ಬಿಳಿಯ ಬಾಳ್ ತುಂಬಿ*
*ಪರಿವುದಾನಂದ ಭಾಗೀರಥಿಯವೋಲ್!"*[21]

ಊರ್ಮಿಳೆ ಹೆಚ್ಚು ಮಾತಾಡಿರುವುದು ಇಲ್ಲಿಯೇ. ಕೈಕೆಯ ದುಃಖವನ್ನು ಕಡಿಮೆಮಾಡಲು ಅವಳ ಮನಸ್ಸಿಗೆ ತುಸುವಾದರೂ ನೆಮ್ಮದಿ ತರುವ ಮಾತುಗಳನ್ನಾಡುತ್ತಾಳೆ. ಆ ಮಾತುಗಳಲ್ಲಿ ಯಾವುದೇ ರೀತಿಯ ವ್ಯಂಗ್ಯವಾಗಲೀ, ಹುಸಿತನವಾಗಲೀ ಇರುವುದಿಲ್ಲ. ಕೈಕೆಯ ಆಂತರ್ಯವನ್ನು ಗುರುತಿಸುವಲ್ಲಿ ಮೊದಲನೆಯವಳಾಗುತ್ತಾಳೆ. ಕೈಕೆಯ ಮನಕ್ಕೆ ಸಮಾಧಾನವನ್ನು ತರುತ್ತಾಳೆ. ಹದಿನಾಲ್ಕು ವರ್ಷಗಳಿಂದ ನಗುವೆಂಬುದೊಂದಿದೆ ಎಂಬುದನ್ನು ಮರೆತಿದ್ದ ಕೈಕೆಯ ಮೊಗದಲ್ಲಿ ನಗು ಮೂಡಿಸುತ್ತಾಳೆ. ಈ ಮೂಲಕ ಶ್ರೀ ಕುವೆಂಪುರವರು ಲಕ್ಷ್ಮಣನನ್ನು ಊರ್ಮಿಳಾ ಪ್ರಾಣೇಶ, ಊರ್ಮಿಳೇಶ, ಊರ್ಮಿಳಾಪ್ರಿಯ, ಊರ್ಮಿಳಾಕಾಂತ, ತಪಸ್ವಿನೀಧವಂ, ಊರ್ಮಿಳಾವಲ್ಲಭ, ಊರ್ಮಿಳಾ ಪ್ರಾಣಪ್ರಿಯ ಎಂದು ಸಂಬೋಧಿಸುತ್ತಾ ಊರ್ಮಿಳೆಯ ಅಪೂರ್ವ ವ್ಯಕ್ತಿತ್ವವನ್ನು ಎತ್ತಿ ಹಿಡಿದಿದ್ದಾರೆ.

ಕೊನೆಗೆ ಹದಿನಾಲ್ಕು ವರ್ಷಗಳಿಂದ ಅಗಲಿದ ಪತಿಯನ್ನು ಸೇರುವ ಬದಲು ಊರ್ಮಿಳೆಯು ತನ್ನ ಅಕ್ಕನಾದ ಸೀತೆಯ ಉಪಚಾರದಲ್ಲಿ ಮೈ ಮರೆಯುತ್ತಾಳೆ. ಆರಂಭದಲ್ಲೂ ಸೀತೆಯ ಮನದ ಮಾತನ್ನು ಹಂಚಿಕೊಳ್ಳುತ್ತಾ ಗೋಚರವಾಗಿದ್ದ ಸೀತೆ ಕೊನೆಯಲ್ಲೂ ಅವಳ ಹತ್ತಿರವೇ ತನ್ನತನವನ್ನು ಮರೆಯುತ್ತಾಳೆ. ಇದರಿಂದ ಊರ್ಮಿಳೆ ಇನ್ನೊಬ್ಬರ ದುಃಖವನ್ನು ಹಂಚಿಕೊಳ್ಳಲೆಂದೇ ಜನ್ಮ ತಳೆದವಳೆಂದು ಅನ್ನಿಸುತ್ತದೆ. ಆಕೆಯು ಮಹಾಕಾವ್ಯದಲ್ಲಿ ಬರುವ ಅವಧಿ ಕಡಿಮೆಯಾದರೂ ಎಲ್ಲರ ಮನದಲ್ಲಿ ಶಾಶ್ವತವಾಗಿ ನೆಲೆ ನಿಲ್ಲುತ್ತಾಳೆ. ಅವಳ ವ್ಯಕ್ತಿತ್ವದಲ್ಲಿ ಮಾತಿಗಿಂತ ಮೌನಕ್ಕೆ ಅಗ್ರಸ್ಥಾನ. "ಊರ್ಮಿಳೆಯ 'ಅಪರಿಪೂರ್ಣ' ಚಿತ್ರದಲ್ಲಿ ಅವಳ ಪರಿಪೂರ್ಣ ವ್ಯಕ್ತಿತ್ವ ಅಭಿವ್ಯಕ್ತಗೊಂಡಿದೆ. ವಿವರವಿವರವಾದ ವಾಚ್ಯರೂಪದ ಬಣ್ಣನೆಯಿಂದ ಹದಗೆಡುತ್ತಿದ್ದ ಅವಳ ಚಿತ್ರ ಗೂಡೋಕ್ತಿಗಳಿಂದ, ವ್ಯಂಗೋಕ್ತಿಗಳಿಂದ, ಅನುಕತೆಯಿಂದ ಉದ್ಧಾಮವಾಗಿ ಕಂಗೊಳಿಸುತ್ತಿದೆ"[12] ಎಂದು ದೇ. ಜವರೇಗೌಡರು ಬಣ್ಣಿಸಿದ್ದಾರೆ. ಎಲ್ಲ ಸಮಯದಲ್ಲೂ ಆಕೆ ಸಮಚಿತ್ತತೆಯನ್ನು ಕಾಯ್ದುಕೊಂಡ ಸಹನಾಧರಿತ್ರಿಯಾಗಿ ಮೂಡಿ ಬಂದಿದ್ದಾಳೆ. ತನ್ನತನವನ್ನು ಇಲ್ಲಗೈಯುವುದು ದೊಡ್ಡ ಸಾಧನೆಯೇ ಸರಿ. ಅದು ಎಲ್ಲರಿಗೂ ಸಾಕ್ಷಾತ್ಕರಿಸುವುದಿಲ್ಲ. ಕುವೆಂಪುರವರು ಊರ್ಮಿಳೆಯನ್ನು ಅನಂತ ನಿರೀಕ್ಷೆ ಹಾಗೂ ಕರ್ತವ್ಯ ಪ್ರಜ್ಞೆಯ ಪ್ರತೀಕವಾಗಿ ಮತ್ತು ಮಹಾನ್ ಮೌನ ಪ್ರತಿಮೆಯನ್ನಾಗಿ ಕಡೆದು ನಿಲ್ಲಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಊರ್ಮಿಳಾದೇವಿಯು ಮಹಾನ್ ಸತಿಯರ ಸಾಲಿನಲ್ಲಿ ವಿಶೇಷ ಬಗೆಯ ಸ್ಥಾನ ಪಡೆಯುತ್ತಾಳೆ.

ಪುರುಷ ನಿರ್ಮಿತ ಮೌಲ್ಯಗಳಿಗೆ ಹಾಗೂ ಆ ಮೂಲಕ ಪರೋಕ್ಷ ಶೋಷಣೆಗೆ ತಾನೇ ವಾಹಕಳಾಗಿಬಿಟ್ಟಿರುವ ಅಜ್ಞಾನದ ದುರಂತವೂ ಊರ್ಮಿಳೆಯ ಪಾತ್ರದಲ್ಲಿ ಕಾಣುತ್ತೇವೆ. ಹಾಗೆಯೇ ಆಕೆ ತನ್ನ ಮೌನ ಪ್ರತಿಮೆಯ ರೂಪದಲ್ಲಿ ಪುರುಷ ನಿರ್ಮಿತ ವ್ಯವಸ್ಥೆಯ ವಿರುದ್ಧದ ಪ್ರತಿಭಾವನೆಯಂತೆ ತೋರುತಾಳೆ. ಈ ಕುರಿತು ಸ್ತ್ರೀಯರ ಸಮಸ್ಯೆಯನ್ನು ಕುರಿತಂತೆ ಸಹಾನುಭೂತಿಯ ವಿಶ್ಲೇಷಣೆಯು ಸ್ತ್ರೀ ಸಂವೇದನೆಯ ಚಿತ್ರಣ ಕುವೆಂಪು ಮಹಾಕಾವ್ಯದ ವೈಶಿಷ್ಟ್ಯವಾಗಿದೆ. 'ಹೋಮರನೂ ತೂಕಡಿಸುತ್ತಾನೆ ' ಎಂಬ ಗಾದೆಯಂತೆ ಈ ಮಹಾಕಾವ್ಯದಲ್ಲಿ ಮಹಾಕವಿಯ ಅವಜ್ಞೆಗೆ ಒಳಗಾದ ಊರ್ಮಿಳೆಗೆ ಕುವೆಂಪು ತಮ್ಮ ಮಹಾಕಾವ್ಯದಲ್ಲಿ ಹೊಸ ಅಸ್ತಿತ್ವ ಸ್ಥಾಪಿಸಿದ್ದಾರೆ.

## ಅಡಿ ಟಿಪ್ಪಣಿ

1. ಪ್ರಾಚೀನ ಸಾಹಿತ್ಯ ರವೀಂದ್ರನಾಥ ಠಾಗೂರ್ ಅನು: ಟಿ. ಎಸ್. ವೆಂಕಣ್ಣಯ್ಯ., ಪು. 86
2. ತಪೋನಂದನ ಕುವೆಂಪು, ಉದಯರವಿ ಪ್ರಕಾಶನ, ಮೈಸೂರು, 1998, ಪು. 5 – 6
3. ಶ್ರೀ ರಾಮಾಯಣ ದರ್ಶನಂ, ಊರ್ಮಿಳಾ ಸಂಪುಟ, ಪು. 98
4. ಸಮಗ್ರ ಪದ್ಯ ಸಂಪುಟ 'ಊರ್ಮಿಳಾ' ಕವನ
5. ಕನ್ನಡ ಕಾವ್ಯ : ಕುವೆಂಪು ಸಂಸ್ಕೃತಿ ಚಿಂತನೆ, ಸಂ.ಪ್ರೊ. ಕೆ.ಸುಮಿತ್ರಾಬಾಯಿ, ಮೈಸೂರು, ಪು.129
6. ಶ್ರೀ ರಾಮಾಯಣ ದರ್ಶನಂ, ಅಯೋಧ್ಯಾ ಸಂಪುಟ, ಪು. 98 – 99
7. ಶ್ರೀ ರಾಮಾಯಣ ದರ್ಶನಂ, ಊರ್ಮಿಳಾ ಸಂಪುಟ, ಪು. 146
8. ಶ್ರೀ ರಾಮಾಯಣ ದರ್ಶನಂ, ಲಂಕಾ ಸಂಪುಟ, ಪು. 618
9. ಶ್ರೀ ರಾಮಾಯಣ ದರ್ಶನಂ, ಶ್ರೀ ಸಂಪುಟ, ಪು. 669
10. ಅದೇ, ಪು. 869
11. ಅದೇ, ಪು. 871
12. ಕುವೆಂಪು ಸಾಹಿತ್ಯ ಕೆಲವು ಅಧ್ಯಯನಗಳು, ಪು. 168

**ಈ. ಮಂಡೋದರಿ : ಪರಿವರ್ತನೆಯ ರೂವಾರಿ**

ಪರಂಪರೆಯು ಗುರುತಿಸುವ ಪಂಚಮಹಾಪತಿವ್ರತೆಯರಲ್ಲಿ ಮಂಡೋದರಿಯು ಒಬ್ಬಳು. ಮಂಡೋದರಿ ದಾನವ ಶಿಲ್ಪಿ ಮಯನಂದನನ ಮಗಳು. ರಾವಣನ ಪತ್ನಿ ಹಾಗೂ ಪಟ್ಟಮಹಿಷಿ. ಮಂಡೋದರಿ ಬಾಹ್ಯದಲ್ಲಿ ಎಷ್ಟು ಸೌಂದರ್ಯನಿಧಿಯಾಗಿದ್ದಳೋ ಆತ್ಮದಲ್ಲೂ ಅಷ್ಟೇ ಸೌಂದರ್ಯ ನಿಧಿಯಾಗಿದ್ದಾಳೆ. ರಾವಣನ ಪತ್ನಿ ಎಂದಷ್ಟೇ ಈಕೆ ಗುರುತಿಸಿಕೊಳ್ಳುವುದಿಲ್ಲ. ಸೀತೆಯಷ್ಟೇ ಮಹತ್ವದ ಸ್ಥಾನ ಮಂಡೋದರಿಗೂ ಇದೆ.

ವಾಲ್ಮೀಕಿ ರಾಮಾಯಣದಲ್ಲಿ ಮಂಡೋದರಿಯ ಮೊದಲ ದರ್ಶನವಾಗುವುದು ನಿದ್ರಾವಸ್ಥೆಯಲ್ಲಿ. ಅವಳಲ್ಲಿ ಇದ್ದಂತಹ ಅಂತಃಶಕ್ತಿ ಸುಪ್ತಾವಸ್ಥೆಯಲ್ಲಿ ಇದ್ದಂತೆ ವಾಲ್ಮೀಕಿ ಚಿತ್ರಿಸುತ್ತಾರೆ. ಹಲವಾರು ಸುಂದರ ಸ್ತ್ರೀಯರಿಗಿಂತ ತುಸು ದೂರದಲ್ಲಿ ಮಂಚದ ಮೇಲೆ ಮಲಗಿದ್ದ ಅಪ್ರತಿಮ ಲಾವಣ್ಯ ನಿಧಿಯಂತಿದ್ದ ಮಂಡೋದರಿ ಇಡೀ ಲಂಖೆಗೆ ಭೂಷಣಳೆಂಬಂತೆ ಮಲಗಿರುತ್ತಾಳೆ. ಆದರೆ ಇವಳು ರಾವಣದ ಮೇಲೆ ಯಾವುದೇ ಪ್ರಭಾವವನ್ನು ಬೀರಲು ಅಸಮರ್ಥಳಾಗಿದ್ದಳು. ರಾವಣನು ಹೊತ್ತು ತಂದಿದ್ದ ಹಲವಾರು ಸುಂದರಿಯರಲ್ಲಿ ಮಂಡೋದರಿಯೂ ಒಬ್ಬಳು ಎಂಬಂತೆ ವಾಲ್ಮೀಕಿ ತಂದಿದ್ದಾರೆ. ರಾವಣ ಅವಳಿಗೆ ಯಾವ ವಿಶೇಷ ಮರ್ಯಾದೆ ಗೌರವಗಳನ್ನು ಕೊಡುತ್ತಿರಲಿಲ್ಲವೆಂದು ಇದು ಸೂಚಿಸುತ್ತದೆ.

ಒಮ್ಮೆ ಸರಿರಾತ್ರಿಯಲ್ಲಿ ರಾವಣನು ಸೀತೆಯನ್ನು ತನ್ನನ್ನು ವರಿಸುವಂತೆ ನಾನಾವಿಧವಾಗಿ ಬೇಡಿಕೊಳ್ಳುತ್ತಾಳೆ. ಆಗ ಸೀತೆ ರಾವಣನಿಗೆ ಕಟುವಾಗಿ ಅವಮಾನವಾಗುವ ಹಾಗೆ ನಿಂದಿಸಿದಾಗ ಅವಳನ್ನು ಕೊಲ್ಲಲು ಮುಂದಾಗುತ್ತಾನೆ. ಆಗ ಆ ಸ್ಥಳಕ್ಕೆ ಬಂದ ಮಂಡೋದರಿಯು ನಿನ್ನ ಸೇವೆಗೆ ನಾವೆಲ್ಲ ಸಿದ್ಧಳಿರುವಾಗ ಮನುಷ್ಯ ಸ್ತ್ರೀಯ ಸಂಗವನ್ನು ಬಯಸುವುದು ಸರಿಯೆ? ಕಾಶಳಾಗಿ ಕಾಮಾಸಕ್ತಿಯೇ ಇಲ್ಲದ ಸೀತೆಯನ್ನು ಬಲವಂತಪಡಿಸಬೇಡ, ಅಂತಃಪುರಕ್ಕೆ ಹೋಗೋಣ ನನ್ನನ್ನು ಭೋಗಿಸುವೆಯಂತೆ ಎಂದು ಕರೆದೊಯ್ಯುತ್ತಾಳೆ. ಮುಂದೆ ರಾವಣನು ರಾಮನಿಂದ ಹತನಾದಾಗ ರಾಮ ಸೀತೆಯರಿಬ್ಬರೂ ದೇವತಾ ಸ್ವರೂಪಿಗಳೆಂದು ಹೇಳುತ್ತಾಳೆ ಮತ್ತು ರಾವಣನ ಅವಗುಣಗಳನ್ನು ಹೇಳುತ್ತಾ ಮನಸ್ವಾಸ್ಥ್ಯ ಕಳೆದುಕೊಂಡವಳಂತೆ ಪ್ರಲಾಪಿಸುತ್ತಾಳೆ. ಹೀಗೆ ವಾಲ್ಮೀಕಿ ರಾಮಾಯಣದಲ್ಲಿ ಮಂಡೋದರಿ ಕಾಣಬರುವುದು ಮೂರು ಬಾರಿ ಮಾತ್ರ. ಇಲ್ಲಿ ವಾಲ್ಮೀಕಿ ಮಂಡೋದರಿಗೆ ಯಾವ ಗೌರವವನ್ನು ತೋರುವುದಿಲ್ಲ. ಮನಸ್ಸಿನಲ್ಲಿ ಉಳಿಯುವಂತ ಮಂಡೋದರಿಯ ಪಾತ್ರವನ್ನು ಕಟ್ಟುವುದಿಲ್ಲ.

ವಾಲ್ಮೀಕಿ ರಾಮಾಯಣದ ನಂತರ ನೂರಾರು ರಾಮಾಯಣಗಳು ಸೃಷ್ಟಿಗೊಂಡಿವೆ. ತುಲಸೀದಾಸರು ತಮ್ಮ 'ತುಲಸೀರಾಮಾಯಣ' ದಲ್ಲಿ ಮಂಡೋದರಿಯ ಪಾತ್ರವನ್ನು ಸ್ವಲ್ಪವಾಗಿ ಮೇಲೆತ್ತಲು ಪ್ರಯತ್ನಿಸಿದ್ದಾರೆ. ತುಲಸೀದಾಸರ ಪ್ರಕಾರ ಮಂಡೋದರಿ ಸುಸಂಸ್ಕೃತೆ. ಅಷ್ಟೇ ಅಲ್ಲ ರಾಮ ಭಕ್ತೆ ಕೂಡಾ ಆಗಿದ್ದಾಳೆ. ಸದಾ ರಾವಣನ ಕ್ಷೇಮದ ಬಗ್ಗೆ ಚಿಂತಿಸುತ್ತಿರುತ್ತಾಳೆ ಹಾಗೂ ಲಂಕೆಗೆ ಏನೂ ಆಪತ್ತು ಒದಗಬಾರದೆಂದು ಎಚ್ಚರವಹಿಸುತ್ತಾಳೆ. ಒಮ್ಮೆ ರಾವಣನು

ಸೀತೆಯನ್ನು ಕೊಲ್ಲಲು ಖಡ್ಗವೆತ್ತಿದಾಗ ಸೀತೆಯನ್ನು ರಕ್ಷಿಸುತ್ತಾಳೆ ಹಾಗೂ ಸೀತೆಯನ್ನು ರಾಮನಿಗೆ ಒಪ್ಪಿಸಿ ಬಿಡಬೇಕೆಂದು ಕೇಳುತ್ತಾಳೆ ಮತ್ತು ರಾಮನ ವಿರುದ್ಧ ದ್ವೇಷವನ್ನು ಕಟ್ಟಿಕೊಳ್ಳಬಾರದೆಂದು ತಿಳಿಹೇಳುತ್ತಾಳೆ. ರಾವಣನ ಮನಸ್ಸನ್ನು ಪರಿವರ್ತಿಸುವ ಪ್ರಯತ್ನ ಮಾಡುತ್ತಾಳೆ. ಹೀಗೆ ವಾಲ್ಮೀಕಿ ರಾಮಾಯಣದಲ್ಲಿ ಉಪೇಕ್ಷೆಗೊಳಗಾಗಿದ್ದ ಮಂಡೋದರಿಯ ಪಾತ್ರವನ್ನು ತುಲಸೀದಾಸರು ತುಸುವಾದರೂ ಉದ್ಧರಿಸುವ ಪ್ರಯತ್ನವನ್ನು ಮಾಡಿದ್ದಾರೆ.

ಕುವೆಂಪು ರಚಿತ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿನ ಮಂಡೋದರಿ ಪರಿವರ್ತನೆಯ ರೂವಾರಿಯಾಗಿ ಚಿತ್ರಿತವಾಗಿದ್ದಾಳೆ. "ಒಬ್ಬ ಅಪೂರ್ವ ಮಹಾಸತಿಯಾಗಿ, ಸೌಂದರ್ಯದಧಿದೇವತೆಯಾಗಿ ಸುಸಂಸ್ಕೃತಿಯ ಶ್ರೇಷ್ಠ ಪ್ರತಿನಿಧಿಯಾಗಿ, ತನ್ನ ಪತಿಯ ಆತ್ಮೋದ್ಧಾರಕಾತರೆಯಾಗಿ, ಸೀತಾದೇವಿಯ ಪಾತಿವ್ರತ್ಯರಕ್ಷಣೆಯ ವಜ್ರಕವಚವಾಗಿ ಲಂಕೆಯ ಯೋಗಕ್ಷೇಮದ ಮಾತೃಹೃದಯವಾಗಿ ಓರ್ವ ಅನ್ಯಾದೃಶ ಸ್ತ್ರೀ ಶಕ್ತಿಯಾಗಿ ಬೆಳಗುತ್ತಾಳೆ"[1] ಅಷ್ಟೇ ಅಲ್ಲದೆ ರಾವಣನಂಥ ದುಷ್ಟನನ್ನು ಉದ್ಧಾರ ಮಾಡುವ ಮಹಾ ಚೈತನ್ಯ ಸ್ವರೂಪಿಯಾಗಿ ಕಂಡು ಬರುತ್ತಾಳೆ.

ಇಲ್ಲಿ ನಮ್ಮ ಮಂಡೋದರಿಯ ಬಗ್ಗೆ ಪರಿಚಯವಾಗುವುದು ಚಂದ್ರನಖಿಯ ಮಾತುಗಳಿಂದ. ಸೀತೆಯ ಸೌಂದರ್ಯ ಜೊತೆ ಹೋಲಿಸುತ್ತಾ 'ನನ್ನತ್ತಿಗೆಯ ರೂಪಿರ್ಪುದಿದಕೆ ಹೊಯಿಕೈಯಪ್ಪುದಾದೊಡಂ' ಎನ್ನುತ್ತಾಳೆ. ಬಾಹ್ಯದಲ್ಲಿ ಆಕೆ ಎಷ್ಟು ಲಾವಣ್ಯವತಿಯೋ ಅಂತರಂಗದಲ್ಲೂ ಅಷ್ಟೇ ಸೌಂದರ್ಯ ನಿಧಿ ಎಂದು ಹೇಳುತ್ತಾಳೆ. ಹೀಗೆ ಮೊದಲಿನಿಂದಲೆ ಮಂಡೋದರಿಯ ಬಗ್ಗೆ ಒಂದು ರೀತಿಯ ಗೌರವ ಸ್ಥಾನವನ್ನು ಕುವೆಂಪು ಕಟ್ಟುತ್ತಾ ಹೋಗುತ್ತಾರೆ.

ರಾವಣ ಮಹಾ ಚಕ್ರವರ್ತಿ, ಪಂಚಭೂತಗಳೇ ತಮ್ಮ ಸ್ವಭಾವವನ್ನುಳಿದು ತಲೆ ತಗ್ಗಿಸಿಬಿಡುತ್ತಿದ್ದವು. ಅಂಥ ರಾವಣ ಪತ್ನಿಯೊಂದಿಗೆ ವಿನಯದಿಂದ ನಡೆದುಕೊಳ್ಳುತ್ತಾನೆ. ಸೀತೆಯನ್ನು ಹೊತ್ತು ತರುವುದಕ್ಕೆ ಮೊದಲು ಮಂಡೋದರಿಯಲ್ಲಿ ಅವನಾಡುವ ಮಾತುಗಳು ಹೀಗಿವೆ :

*"ನಿನಗೆ ದಾಸಿಯಂ*
*ಮತ್ತೊರ್ವಳಂ ತರ್ಪೆನಾ ಜನಕಜಾತೆಯಂ*
*ನೆಲದರಿಕೆವೆಸರ ಆ ಸೀತೆಯಂ!"* [2]

ಈ ಮಾತುಗಳಿಂದ ರಾವಣನಿಗೆ ಮಂಡೋದರಿಯ ಮೇಲಿದ್ದ ಪ್ರೀತಿ ಗೌರವಗಳು ವ್ಯಕ್ತವಾಗುತ್ತದೆ. ಸೀತೆ ಯಾದರೂ ಅವಳು ಮಂಡೋದರಿಗೆ ದಾಸಿ ಮಾತ್ರ ಎಂದು ತಿಳಿಸುತ್ತಾನೆ. ಸೀತಾ ಸ್ವಯಂವರ ಸುದ್ದಿಯನ್ನು ಕೇಳಿ ನೊಂದುಕೊಳ್ಳುತ್ತಾಳೆ. ಏನೊಂದೂ ಮಾತನಾಡದೆ ಕಣ್ಣೀರಿಟ್ಟು ಮನದ ಎಲ್ಲ ಭಾವನೆಗಳನ್ನು ವ್ಯಕ್ತಪಡಿಸುತ್ತಾಳೆ. ರಾವಣ ನಿರಂಕುಶಪ್ರಭು. ಅವನೆದುರು ಮಾತಾಡುವ ಗಂಡೆದೆ ಯಾರಿಗೂ ಇಲ್ಲ. ಅವನ ಹಠಕ್ಕೆ ಅಡ್ಡಲಾಗಿ ಬರಲು ಯಾರಿಗೂ ಧೈರ್ಯವಿಲ್ಲ. ಅಂತಹ ರಾವಣ ತನ್ನ ಮನಸ್ಸಿಗೆ ನೋವಾದಾಗ ಕ್ಷೋಭೆಗೊಳಪಟ್ಟಾಗ ಅವನು ಬರುವುದು ಮಂಡೋದರಿಯ ಮಂದಿರಕ್ಕೆ. ಮಂಡೋದರಿ ರಾವಣನ ಮನಃಪರಿವರ್ತನೆಗಾಗಿ ಶಿವನನ್ನು ಆರಾಧಿಸುತ್ತಿರುತ್ತಾಳೆ. ಸೀತೆಯನ್ನು ತರುತ್ತೇನೆಂದು ಹೇಳಿದಾಗ ಹೊರಡುವ ಅವಳ ಕಂಬನಿ ಇಡೀ ಮಹಾಕಾವ್ಯದುದ್ದಕ್ಕೂ ಹರಿಯುತ್ತದೆ. ಒಮ್ಮೆ ರಾವಣ ಮಂಡೋದರಿಯ

ಮಂದಿರದಲ್ಲಿ ಅವನು ಬಂದಾಗ ಅವಳ ಕಣ್ಣೀರನ್ನು ನೋಡಿ ದೈತ್ಯ ರಾಜೇಂದ್ರನ ಕಣ್ಣು ಹನಿಗೂಡುತ್ತದೆ. 'ದೇವಿ ನಿನ್ನರೆಯೇಂ' ಎಂದು ಕೇಳಿದಾಗ ಅವಳ ಮಾತುಗಳಲ್ಲಿ ಅವಳ ಮನದಾಸೆ ವ್ಯಕ್ತವಾಗುತ್ತದೆ:

*"ಸಂಗತಿಗರಕೆಯೇಂ,*
*ಜೀವೇಶ? ಪತಿ ಹೃದಯಮಂ ಪಡೆವುದಲ್ಲದೆಯೆ*
*ಬೇರಾವುದರಕೆ?"*[3]

ಪತಿಯ ಬಲವನ್ನು ಬಿಟ್ಟರೆ ಸತಿಯಾದವಳಿಗೆ ಇನ್ನೇನು ಬೇಕೆನ್ನುತ್ತಾಳೆ. ರಾವಣನು ಎಂದೆಂದಿಗೂ ಮಂಡೋದರಿಯೇ ತನ್ನ ಒಲವು ಎಂದಾಗ ಅವಳ ದುಃಖ ತುಸು ತಾತ್ವಿಕವಾಗಿ ಕ್ರೋಧಕ್ಕೆ ತಿರುಗುತ್ತದೆ. ಹದಿಬದೆಯನ್ನು ತಂದರೆ ಲಂಕೆಯು ದಹಿಸದೆ ಕುಲದ ಮರ್ಯಾದೆ ನಾಶವಾಗದೆ ಎಂದು ಹೇಳುತ್ತಾಳೆ. 'ಹದಿಬದೆ', 'ಪಾತಿವ್ರತ್ಯ' ಇವುಗಳಲ್ಲಿ ನಂಬಿಕೆಯನ್ನಿಡದ ರಾವಣ ವ್ಯಂಗ್ಯಮಾಡುತ್ತಾನೆ. ಆಗ ಪಾತಿವ್ರತ್ಯವೇನೆಂದು ತನ್ನ ಕೆಚ್ಚಿನ ನುಡಿಗಳಲ್ಲಿ ಹೀಗೆ ಹೇಳುತ್ತಾಳೆ.

*"ಪ್ರಾಣೇಶ, ದೈತ್ಯೇಂದ್ರ*
*ಮತ್ತೊರ್ವ ನಿದ್ದಿದ್ದರೀತೆರನ ರಾವಣಂ*
*ತೋರುತಿರ್ದಳ್ ನಿನಗೆ ಹದಿಬದೆಯರಿರ್ಪುದಂ,*
*ಹದಿಬದೆತನದ ಹಿರಿಮೆಯಂ, ನಿನ್ನ ಈ ಮಯನ*
*ಮಗಳಬಲೆ!"*[4]

"ಈ ನುಡಿಗಳಲ್ಲಿ ಕೆಚ್ಚು, ಆತ್ಮಸ್ಥೈರ್ಯ, ಸ್ವಾಭಿಮಾನ, ಹಾಗೂ ಆಕೆಯ ಶೀಲಸತ್ವ ಶುದ್ಧತೆಯನ್ನು ಅತ್ಯಂತ ಪರಿಣಾಮಕಾರಿಯಾಗಿ ಧ್ವನಿಸುವುದು ಮಾತ್ರವಲ್ಲದೆ, ಯಾರಿಗೂ ಅಳುಕದ ದನುಜನೆದೆಯನ್ನು ದಿಗಿಲುಗೊಳಿಸುತ್ತದೆ"[5] ಆಗ ಮಗುವಿನಂತೆ ತನ್ನ ಮನದ ಮಾತುಗಳನ್ನು ಬಿಚ್ಚಿಡುತ್ತಾನೆ.

*"ನೀನೆನಗೆ ಶಾಂತಿ*
*ಸತ್ತ್ವಮಾತ್ರಂ; ನೀನೆನಗೆ ತುತ್ತ ತುದಿಯಾಸೆ,*
*ನೆಲೆ, ನೆಚ್ಚು ಸೈಪು! ದೇವನೆ ಪೇಸಿ ಬಿಟ್ಟೊಡಂ*
*ಕೆಟ್ಟೆನಲ್ಲೆನ್ ; ಪ್ರೇಮಮಯಿ ನಿಂ ತೊರೆಯೆ, ಅಯ್ಯೊ, ಶೂನ್ಯನೆಂ"*[6]

ಎಂದು ಆಕೆಯ ಮುಂದೆ ತನ್ನ ಮನೋದೌರ್ಬಲ್ಯವನ್ನು ವ್ಯಕ್ತಪಡಿಸುತ್ತಾನೆ. ಹೀಗೆ ರಾವಣ ಹಂತಹಂತವಾಗಿ ಮಂಡೋದರಿಯ ಮಾತುಗಳಿಂದ ಪರಿವರ್ತಿತವಾಗುತ್ತಾ ಹೋಗುತ್ತಾನೆ. ಮಂಡೋದರಿಯು ಸೀತೆಯನ್ನು ನೋಡಲು ಅಪೇಕ್ಷಿಸಿದಾಗ ರಾವಣನು ನಿನ್ನ ಹದಿಬದಿಯ ಪ್ರಭಾವದಿಂದ ಸೀತೆಯ ದೃಢತೆಯೂ ಹೆಚ್ಚಾಗಬಹುದೆಂದು ಹೆದರುತ್ತಾನೆ. ಆಕೆಯನ್ನು ನೀನೆಂದಿಗೂ ಗೆಲ್ಲಲಾರೆ ಎಂದು ಭವಿಷ್ಯ ನುಡಿದಂತೆ ತಿಳಿಸುತ್ತಾಳೆ. ಆಗ ರಾವಣ "ನನ್ನಚ್ಚೆ ಸೋಲ್ಗೆ; ಹದಿಬದೆ ಗೆಲ್ಗೆ; ನಿನ್ನಸೆಯುಂ ಸಲ್ಗೆ;" ಎಂದು ಹೇಳುತ್ತಾನೆ. ಇದರಿಂದ ಸೀತಾಮೋಹಿ ರಾವಣನ ಮನಸ್ಸು ಮಂಡೋದರಿಯ ಮಾತುಗಳಿಂದ ಪರಿವರ್ತನೆ ಆಗುತ್ತಿರುವುದನ್ನು ಸೂಚಿಸುತ್ತದೆ, ಹಾಗೂ ಅವಳ ಸತಿಶಕ್ತಿ ಅವನ ಕಾಮಾಸಕ್ತಿಯನ್ನು ಪರಿವರ್ತಿಸಬಲ್ಲದೆಂದು ಅವನಿಗೆ ಅರಿವಾಗುತ್ತದೆ. ಅದಕ್ಕೆ ಅವನ ಈ ಮಾತುಗಳು ಸ್ಪಷ್ಟವಾಗಿವೆ :

*"ನೀಂ ಮಹಿಮಳಾನಲ್ಪನೆಂ ದೇವಿ, ನಿನ್ನೊಳ್ಪು*
*ಶಿಕ್ಷಿಸಂ ರಕ್ಷಿಸಲಿ ಧನ್ಯನಾಂ!"* [8]

ಮಂಡೋದರಿಯು ಪತಿಯ ಆಜ್ಞೆಯನ್ನು ಎಲ್ಲೂ ಮೀರುವುದಿಲ್ಲ. ಸೀತೆಯನ್ನು ಕಂಡು ಮಾತಾಡಲು ಸಮ್ಮತಿಯನ್ನು ರಾವಣನು ಕೊಟ್ಟಿರುವುದಿಲ್ಲ. ಇದರಿಂದ ಮಂಡೋದರಿ ಏಳು ರಾತ್ರಿಗಳು ದೂರದಿಂದಲೇ ಸೀತೆಯನ್ನು ಕಂಡು ಹೋಗುತ್ತಿರುತ್ತಾಳೆ. ಮಂಡೋದರಿಗೆ ರಾವಣ ಪ್ರತಿ ಬಾರಿಯೂ ಒಂದೊಂದು ಹೆಣ್ಣುಗಳನ್ನು ತಂದಾಗ ಅವಳ ಮನವು ದುಃಖದಿಂದ ಕುದಿಯುತ್ತಿರುತ್ತದೆ. ಎಲ್ಲ ನೋವುಗಳನ್ನು ಮನದಲ್ಲಿ ಹೂತಿಟ್ಟಿರುತ್ತಾಳೆ. ಆದರೆ ಮಹಾನ್ ಸತಿಯಾದ ಸೀತೆ ಅವಳನ್ನು ಕಂಡು ಯಾರೆಂದು ಕೇಳಿದಾಗ ತನ್ನ ಮನದ ದುಃಖವನ್ನೆಲ್ಲ ಹೊರಗೆಡಹುತ್ತಾಳೆ:

*"ನಾನಕ್ಕನೆನ್*
*ನಿನಗೆ, ತಂಗೆ, ವಯಸ್ಸಿನಿಂದಂತೆ ದುಕ್ಕದಿಂ!*
*ನನ್ನವೋಲತಿ ದುಃಖಿ, ಲಂಕೆಯೊಳಗಂತಿರ್ಕೆ*
*ಸೃಷ್ಟಿಯೊಳಗಿಲ್ಲಮೆಂದರಿ"* [9]

ಈ ಮಾತುಗಳಿಂದ ಮಂಡೋದರಿ ಎಂದರಿತ ಸೀತೆಯು ಅವಳ ಕಾಲಿಗೆ ನಮಸ್ಕರಿಸುತ್ತಾಳೆ. ಇದು ಕುವೆಂಪು ತಂದಿರುವ ವೈಶಿಷ್ಟ್ಯಗಳಲ್ಲೊಂದು ಯಾವ ರಾಮಾಯಣಗಳಲ್ಲೂ ನಾವು ಈ ದೃಶ್ಯವನ್ನು ಕಾಣಲು ಸಾಧ್ಯವಾಗುವುದಿಲ್ಲ. ಮಂಡೋದರಿಯು ನಮಸ್ಕರಿಸಬಾರದು ನಾನು ಅಸುರಿ ಎಂದಾಗ ಸೀತೆಯು ನೀನು ಅಸುರಿಯಲ್ಲ, ನೀನನು ನಮಗೆ ದೇವತೆ ಪತಿವ್ರತೆಯಾಗಿ ಆದರ್ಶಮಾತೆ. ನಿನಗೆ ನಮಿಸುವುದರಿಂದ ಶೀಘ್ರವೇ ಮಂಗಳವಾಗುತ್ತದೆಂದು ಹೇಳುತ್ತಾಳೆ. ಇದರಿಂದ ಮಂಡೋದರಿಯ ವ್ಯಕ್ತಿತ್ವ ಇನ್ನಷ್ಟು ಉನ್ನತೀಕರಣಗೊಳ್ಳುತ್ತದೆ.

ಇದುವರೆಗೂ ರಾವಣ ದ್ವೇಷಿಯಾಗಿದ್ದ ಸೀತೆಯ ಮನವು ಮಂಡೋದರಿಯ ಭೇಟಿಯ ನಂತರ ಪರಿವರ್ತನೆ ಹೊಂದುತ್ತದೆ. ನಾನೇ ದುಃಖಿ ಎಂದುಕೊಂಡಿದ್ದ ಸೀತೆಗೆ ಪರಮದುಃಖಿಯಾಗಿ ಮಂಡೋದರಿ ಕಂಡುಬರುತ್ತಾಳೆ. ಸೀತೆಯ ಉದ್ದೇಶ ಹಾಗೂ ಮನಸ್ಸನ್ನೇ ಮಂಡೋದರಿಯು ತನ್ನ ಶುಭ್ರಚಾರಿತ್ರ್ಯದಿಂದ ಪರಿವರ್ತಿಸಿಬಿಡುತ್ತಾಳೆ. ಮಂಡೋದರಿಯ ವ್ರತದಲ್ಲಿ ಸೀತೆಯ ತಪಸ್ಸು ಸೇರಿಕೊಳ್ಳುತ್ತದೆ. "ಈ ಇಬ್ಬರ ತಪಸ್ಸು ರಾವಣ ಹೃದಯದ ಇದ್ದಿಲನ್ನು ಸುಟ್ಟು ವಜ್ರವಾಗಿಸುವ ಸಾಧನೆಯನ್ನು ಕೈಗೊಳ್ಳುತ್ತದೆ"[10]

ಸೀತೆ ಹಾಗೂ ಮಂಡೋದರಿ ಇಬ್ಬರ ನಡುವೆ ತೂಗುಯ್ಯಾಲೆಯಲ್ಲಿದ್ದ ರಾವಣನ ಮನಸ್ಸು ಈಗ ಮಂಡೋದರಿಯಲ್ಲಿ ದೃಢವಾಗಿ ನೆಡುತ್ತದೆ. ಸೀತೆಯನ್ನು ನಾನು ಭೇಟಿಯಾದೆ ಎಂದು ತಿಳಿಸಿದಾಗ 'ನಾನು ಕೆಟ್ಟೆ' ಎನ್ನುತ್ತಾನೆ. ನಾನು ಈಗ ಕೊನೆಯ ಬಾರಿ ಅಶೋಕವನಕ್ಕೆ ಹೋಗಿಬರುವೆನೆಂದಾಗ ಮಂಡೋದರಿಯು ರಾವಣನ ಪಾದಗಳನ್ನು ತಬ್ಬಿ ಆಡುವ ಮಾತುಗಳು ಅವನ ಮನಸ್ಸಿನ ಅಂಧಕಾರವನ್ನು ಕಳೆಯುವ ಜ್ಞಾನದ ಬೆಳಕಿನಂತಿವೆ:

*"ಬೇಡ ಬೇಡೀ ಹರಿದ*
*ಸಾಹಸಂ, ರಾಜೇಂದ್ರ, ರುಚಿಗೆ ಕೈ ಗೊಂಡುದಂ*
*ಛಲಕೆ ಮುಂಬರಿವುದೇಂ ಸುಖವೆ, ಸರಸವೆ, ಮತಿಯೆ,*
*ಸಚ್ಚರಿತ್ರವೆ, ಜೀವಿತೇತ್ವರ? ಪತಿವ್ರತೆಯ*
*ಸುವ್ರತದ ಮಹಿಮೆಯಿಂ ಸಂಯಮವನೆರ್ದೆಗೊಳಲ್*
*ಸೋಲೆಂಬರೇನದಂ ಸುಕೃತ ಮರೆಗಳ್? ಶಿವಕೆ*
*ಶರಣಾದರದು ಸೋಲೆ? ಆ ಗೆಲ್ಗೆ ಮಿಗಿಲೊಳದೆ*
*ಬೇರೆ ಗೆಲ್ಲಂ? ಇಂದ್ರವಿಜಯಿಗಿಂ ನೂರು ಮಡಿ*
*ವೀರವಿಕ್ರಮಿಯತ್ತಿ ಇಂದ್ರಿಯ ವಿಜಯಿ? ಬರಿಯ*
*ಈ ಬಿಂಕದಂಕಮಂ ತೊರೆ ಸೋಲು ಸತ್ಯಕ್ಕೆ ;*
*ನಮಗದುವೆ ಗೆಲ್ ಸೋಲು ಧರ್ಮಕ್ಕೆ ; ನಮಗದುವೆ ಗೆಲ್"* [10]

ಈ ಮಾತುಗಳು ರಾವಣನ ಮನಸ್ಸನ್ನು ಬಹುವಾಗಿ ಪರಿವರ್ತಿಸುತ್ತವೆ. ಇವು ಮಂಡೋದರಿಯ ಅಂತರಂಗಕ್ಕೆ ಕನ್ನಡಿಯನ್ನು ಹಿಡಿಯುತ್ತವೆ. ಮಂಡೋದರಿಯ ಪ್ರಭಾವದಿಂದ ಎಂಥವರೂ ಪರಿವರ್ತನೆಯಾಗುತ್ತಾರೆಂಬ ನಿರ್ಧಾರಕ್ಕೆ ಬರುತ್ತಾನೆ. ಕೊನೆಗೆ ಸತಿಯ ಸಾನ್ನಿಧ್ಯವೆಂಬಂತೆ ಅವನ ಮನದಲ್ಲಿ ಬದಲಾವಣೆಯ ಮಿಂಚು ಮೂಡುತ್ತದೆ. ತನ್ನ ಆತ್ಮವಿಮರ್ಶೆಗೆ ತೊಡಗುತ್ತಾನೆ.

*"ಪೂಜ್ಯೆ ಈ ಸತಿಗೆ*
*ತನ್ನ ಪತಿಯಾತ್ಮದುದ್ಧಾರ ಕಾರ್ಯದೊಳಿಂದು*
*ನೆರವಾಗದಿರ್ದೊಡಾಂ ಧರ್ಮಚ್ಯುತಂ"*

*ಎಂಬ ನಿರ್ಧಾರಕ್ಕೆ ಸೋಲುತ್ತಾನೆ. ಅವನ ಮನಸ್ಸು ಈಗ ಸಂಪೂರ್ಣ ಬದಲಾಗಿರುವುದನ್ನು ಈ ಮಾತುಗಳಿಂದ ಗುರುತಿಸಬಹುದು :*

*"ಅವಳೊಂದು ಕಡೆ, ನೀನೊಂದು ಕಡೆ, ಮತ್ತೆ*
*ಆ ವಿಭೀಷಿಣ ನೊಂದು ಕಡೆ, ನನ್ನ ಚಿತ್ರಮಂ*
*ಚಲಿಸು ತಿರ್ಪಿರಿ, ಮದನ ಧೈರ್ಯ ಧ್ರುಮದ ಬೇರ್ಗೆ*
*ಬೆನ್ನೀರನಡತ, ಆದೊಡೇಂ? ಗೃಹ ವೈರಿಗಳ್*
*ಗೆತ್ತು ನಿಮ್ಮನಿಬರಂ, ರಾಮನನ್ನೆಂತಂತೆ*
*ಗೆಲ್ವೆನೆಂಬುದೆ ನನ್ನ ಪೂಣ್ಕೆ!"* [12]

ಹೀಗೆ ವಜ್ರದಂತ ಅವನ ಮನಸ್ಸನ್ನು ಬದಲಿಸಿದ ಮೂರು ಶಕ್ತಿಗಳನ್ನು ಗುರ್ತಿಸುತ್ತಾನೆ. ಸೀತೆಯ ಕಠೋರ ತಪಸ್ಸು, ಮಂಡೋದರಿಯ ಮಹಾಪ್ರಾರ್ಥನೆ ಹಾಗೂ ವಿಭೀಷಣನ ವಾತ್ಸಲ್ಯಭರಿತ ಬುದ್ಧಿವಾದ, ಇವು ರಾವಣನ ಅಸುರಿತನವನ್ನು ನಿಗ್ರಹಿಸಿದ ಹಾಗೂ ಅವನ ಆತ್ಮವಿಮರ್ಶೆಗೆ ಕಾರಣವಾದ ಪ್ರಮುಖ ಅಸ್ತ್ರಗಳು. "ಸಂಗ್ರಾಮದಲ್ಲಿ ದುಷ್ಟ ನಿಗ್ರಹ ಮಾಡುವುದು ಸುಲಭದ ಕೆಲಸ. ಆದರೆ ದುಷ್ಟಪರಿವರ್ತನೆ ಮಾಡುವುದು ಅದಕ್ಕಿಂತಲೂ ಘನಘೋರತನ ಅಗೋಚರ ಸಂಗ್ರಾಮ!! ಅಂಥ ಅಗೋಚರ ಘೋರ ಸಂಗ್ರಾಮವನ್ನು ನಡೆಸಿ ಯಶಸ್ವಿಯಾದ ಮಹಾಸತಿ – ಮಂಡೋದರಿ!!"[13]

ತನ್ನ ವಯಸ್ಸಿಗೆ ಬಂದ ಮಗ ಸತ್ತರೆ ಸಾಮಾನ್ಯ ಹೆಣ್ಣಾದವಳು ದುಃಖದ ಭರತದಲ್ಲಿ ಆಲೋಚನಾ ಶಕ್ತಿಯನ್ನೆ ಕಳೆದುಕೊಳ್ಳುತ್ತಾಳೆ. ಅದೇ ರೀತಿ

ಇಂದ್ರಜಿತುವನ್ನು ಲಕ್ಷ್ಮಣ ಕೊಂದಾಗ ತನ್ನೊಬ್ಬನೇ ಮಗನ ದುರ್ಮರಣದಿಂದ ಮಂಡೋದರಿ ಜರ್ಝರಿತಳಾಗುತ್ತಾಳೆ. ಆದರೆ ಸಂಯಮವನ್ನು, ಆಲೋಚನ ಶಕ್ತಿಯನ್ನು ಕಳೆದುಕೊಳ್ಳುವುದಿಲ್ಲ. ರಾವಣ ಈ ಎಲ್ಲದಕ್ಕೂ ಮೂಲಕಾರಣ ಸೀತೆಯೆಂದು ಅವಳನ್ನು ಕೊಲ್ಲಲು ಮುಂದಾದಾಗ ಅವನ ಮಾತನ್ನು ಕೇಳಿ ಭಯಗೊಳ್ಳುತ್ತಾಳೆ. ದೀನಭಾವದಿಂದ ಅವನಿಗೆ ಕೈ ಮುಗಿದು ಕೊಲ್ಲಬೇಡವೆಂದು ಬೇಡುತ್ತಾಳೆ. ಸತಿಯ ವಿಕಾರ ಮುಖವನ್ನು ನೋಡಲಾರದೆ ರಾವಣನು ಹೀಗೆ ಕೂಗಿಕೊಳ್ಳುತ್ತಾನೆ :

*"ಏನಿದೇನ್?*
*ಆವ ಭಯಕೀ ಮುಖವಿಕಾರಂ ನಿನಗೆಪೇಳ್?*
*ಬೆದರದಿರ್ ಮಹಿಷಿ, ಏಕೆನಗೆ ಕೈ ಮುಗಿಯುತಿಹೆ?*
*ನೋಡಲಾರೆನ್ ನಿನ್ನ ವದನ ವೈರೂಪ್ಯಮಂ!*
*ತಪ್ಪಾಯ್ತು, ಕೊಲ್ಲೆನವಳಂ; ಕ್ಷಮಿಸು!"* [14]

ಎಂದು ಸೀತೆಯನ್ನು ಕೊಲ್ಲುವ ವಿಷಯವನ್ನು ಕೈಬಿಡುತ್ತಾನೆ. ಇದು ಮಂಡೋದರಿಯ ದುಃಖವನ್ನು ನೋಡಲಾಗದೆ ಅವನಲ್ಲಿ ಉರಿಸಿದ ಅವಳ ಬಗೆಗಿನ ಪ್ರೇಮ ಹಾಗೂ ಗೌರವದ ಸಂಕೇತವಾಗಿದೆ. ಇಲ್ಲಿ ಮಂಡೋದರಿಗೆ ತನ್ನ ದುಃಖಕ್ಕಿಂತ ಹೆಚ್ಚಾಗಿ ಸೀತೆಗೆ ಏನೂ ತೊಂದರೆ ಆಗಬಾರದೆಂಬ ಆಶಯವಿದೆ.

ಸೀತೆಯ ಕ್ಷೇಮದ ಬಗ್ಗೆ ಹೀಗೆ ಸದಾ ಚಿಂತಿಸುತ್ತಿರುತ್ತಾಳೆ. ಮಗನ ಸಾವಿಗೆ ಕಾರಣಳಾದ ಸ್ತ್ರೀಯ ಬಗ್ಗೆ ಈ ರೀತಿ ಪ್ರೇಮವನ್ನು, ಕ್ಷೇಮವನ್ನು ಬಯಸುವ ಮಾತೆಯರು ಸಿಗುವುದು ತುಂಬ ವಿರಳ. ಇದು ಮಂಡೋದರಿಯ ಮಹತ್ ಶಕ್ತಿಯನ್ನು ಪ್ರತಿನಿಧಿಸುತ್ತದೆ.

ಮಂಡೋದರಿಯ ಪ್ರಭಾವ ರಾವಣನ ಮನಸ್ಸಿಗೆ ಹೆಚ್ಚಾದಂತೆ ಸೀತೆಯ ಬಗೆಗಿನ ಆಸಕ್ತಿ ಅವನಲ್ಲಿ ಕಡಿಮೆಯಾಗುತ್ತದೆ. ಸೀತೆಯ ಮೇಲಿನ ಕಾಮಾಸಕ್ತಿ ಅವನ ಮನಸ್ಸಿನಿಂದ ಸಂಪೂರ್ಣವಾಗಿ ದೂರವಾಗುತ್ತದೆ. ರಾಮನ ಮೇಲೆ ವಿಜಯ ಸಾಧಿಸಲು ದುರ್ಗೆಯಲ್ಲಿ ವರಗಳನ್ನು ಕೇಳಿದಾಗ ಅವನಲ್ಲಿ ಒಂದು ರೀತಿಯ ಶಕ್ತಿ ಆವರಿಸುತ್ತದೆ. ದೇವಿ ವರವನ್ನು ಕೊಡುತ್ತಾಳೆ. ಆದರೆ ಅದು ಧ್ವನಿಸುವ ಅರ್ಥವು ವೈಶಿಷ್ಟ್ಯ ಪೂರ್ಣವಾದುದು. ಸೀತೆಯನ್ನು ಮಾತೃರೂಪದಲ್ಲಿ ಅನುಭೂತಿ ಪಡೆಯುತ್ತಾನೆ. ಸ್ವಪ್ನದಿಂದ ಎಚ್ಚೆತ್ತ ರಾವಣ ತನ್ನ ದಿಗಿಲನ್ನು ದ್ವಂದ್ವವನ್ನು ಬಗೆಹರಿಸಿಕೊಳ್ಳಲು ಬರುವುದು ಮಂಡೋದರಿಯ ಹತ್ತಿರ. ನನ್ನನ್ನು ರಕ್ಷಿಸು ಎಂದು ಆರ್ತನಾದ ಮಾಡುತ್ತಾನೆ. ಆಗ ಮಂಡೋದರಿ ಪತಿಯನ್ನು ಜಾಗ್ರದಾವಸ್ಥೆಗೆ ತರುತ್ತಾಳೆ. ರಾವಣ ತನ್ನ ಸ್ವಪ್ನದ ಸಂಗತಿಯನ್ನು ತಿಳಿಸಿದಾಗ ಅವಳಿಗೆ ಸಂತೋಷವಾಗುತ್ತದೆ. ರಾವಣನ ಪರಿವರ್ತಿತಗೊಂಡ ಸ್ಥಿತಿಯನ್ನು ಗಮನಿಸುತ್ತಾಳೆ.

ಸೀತೆಯಲ್ಲಿ ನಿನಗಿರುವ ಸಾತ್ವಿಕಭಾವಕೆ ಸ್ವಪ್ನದಲ್ಲಿ ಹೀಗೆ ಪ್ರತಿಮೆಯ ರೂಪದಲ್ಲಿ ಬಂದಿದೆ ಎಂದು ಅವನ ಮನಸ್ಸಿನಲ್ಲಿದ್ದ ಪಾಪ ನಾಶ ಹೊಂದಿದೆ ಎಂದು ತಿಳಿಸುತ್ತಾಳೆ. ರಾವಣನಿಗೆ ತನ ರೂಕ್ಷ ಭಾವ ಕಳೆದು ಮಂಡೋದರಿಯ ಪ್ರಾರ್ಥನೆಯ, ಕಠಿಣ ತಪಸ್ಸಿನ ಫಲವಾಗಿ ಅವನ ಅಹಃಕಾರಗಳೆಲ್ಲ ಕರಗಿ ಹೃದಯದಲ್ಲಿ ಪೂಜ್ಯಭಾವ, ಕೃತಜ್ಞತಾ ಭಾವನೆಗಳು ಹುಟ್ಟುತ್ತವೆ. ಮಂಡೋದರಿಯ ಬಗ್ಗೆ ಅಪಾರ ಗೌರವ ಹುಟ್ಟುತ್ತದೆ. ತನ್ನನ್ನು ಕೈ ಬಿಡದಂತೆ ಈ ಪಾಪಿಯನ್ನು

ಉದ್ಗರಿಸೆಂದು ಪತ್ನಿಯಲ್ಲಿ ಕೇಳುತ್ತಾನೆ. ಆಗ ತುಂಬಿದ ಗೊನೆಬಾಗುವಂತೆ ಪತಿಯ ಗೌರವಕ್ಕೆ ಪಾತ್ರವಾಗುವ ಭಾಗ್ಯ ಎಷ್ಟು ಜನಕ್ಕಿದೆ ಎಂದು ಮನದಲ್ಲಿ ಭಾವಿಸಿ ಅವನ ಅಡಿಗೆರಗುತ್ತಾಳೆ. ಆಗ ಅವಳ ಬಗೆಗಿನ ಸತ್ಯದ ಹೀಗೆ ಮಾತುಗಳನ್ನಾಗಿತುತ್ತಾನೆ.

*"ನಿನಗಂ ಮಿಗಿಲ್ ಸೀತೆ*
*ನನಗೆ ದೇವತೆ, ಮಾತೆ! ಶ್ರದ್ಧೆ ಗೆಟ್ಟಿರ್ದನಗೆ*
*ಶ್ರದ್ಧೆಯಂ ಮರುಕೊಳಿಸುತಾತ್ಮದುದ್ಧಾರ ಮಂ*
*ತಂದ ದೇವತೆ, ಪುಣ್ಯಮಾತೆ!"* [15]

ಇವು ಅವನ ಅಂತರಂಗದ ಮಾತು. ಈ ಮಾತುಗಳಿಗಾಗಿ ಮಂಡೋದರಿ ಪಟ್ಟ ಶ್ರಮ ಹರಿಸಿದ ಕಣ್ಣೀರಿಗೆ ಕೊನೆ ಮೊದಲಿಲ್ಲ. ಈ ಮಾತುಗಳನ್ನು ಕೇಳದ ಮಂಡೋದರಿಗೆ ತನ್ನ ಜೀವನ ಸಾರ್ಥಕವೆಂಬ ಭಾವನೆ ಬರುತ್ತದೆ.

*"ನಾ ಧನ್ಯೆದಲ್!*
*ಬಾಳ್ ಸಾರ್ಥಕಂ; ಸಾವೊ ಬದುಕೊ? ಇನ್ನೆನಗಿರದು*
*ವ್ಯಥೆ! ತಿಳಿದೊಡೀ ನಿನ್ನ ಹೃದಯಂ, ತ್ರಿಮೂರ್ತಿಗಳ್*
*ಬಂದು ಮೀಯರೆ ಅಲ್ಲಿ!"* [16]

ಮಂಡೋದರಿಯ ಭಾವ ತುಂಬಿರುತ್ತದೆ. ಆದರೆ ರಾವಣನ ಪರಿವರ್ತಿತ ಸ್ಥಿತಿ ತಿಳಿಯುವುದು. ಚಂದ್ರನಖಿ ಮತ್ತು ಮಂಡೋದರಿಗೆ ಮಾತ್ರ. ಪತ್ನಿಯಲ್ಲಿ ತನ್ನ ಮನದಾಳದ ಮಾತುಗಳನ್ನು ಬಿಚ್ಚಿಡುತ್ತಾನೆ. ರಾಮನನ್ನು ಯುದ್ಧದಲ್ಲಿ ಗೆದ್ದು ಸೀತೆಯನ್ನು ಕಾಣಿಕೆಯಾಗಿ ಕೊಡಲು ಅವನ ಮನ ಹಂಬಲಿಸುತ್ತದೆ. ಯುದ್ಧ ಮಾಡದೆ ಸೋಲೊಪ್ಪಿಕೊಳ್ಳುವ ಜಾಯಮಾನ ರಾವಣನದಲ್ಲ. ರಾಮನ ಮೇಲೆ ಗೆಲುವು ಸಾಧಿಸಿ ಅವನಿಗೆ ಶರಣಾಗುತ್ತೇನೆ ಎಂದು ನಿಶ್ಚಯಿಸಿಕೊಳ್ಳುತ್ತಾನೆ.

ಅಂತಿಮವಾಗಿ ರಾಮ ರಾವಣರ ಕಾಳಗದಲ್ಲಿ ಮೊದಲು ರಾಮ ಬಿಟ್ಟ ಬಾಣಗಳೆಲ್ಲವೂ ವ್ಯರ್ಥವಾಗಿ ಹೋಗುತ್ತದೆ. ಆಗ ಅವನಾಡುವ ಮಾತುಗಳು ಹೀಗಿವೆ

*"ನಿನಗದಂ*
*ಪೇಳ್ವೆನೆಂತುಟೊ, ಇಂದ್ರ ಸಾರಥಿ? ಪತಿವ್ರತಾ*
*ಸತಿಯಿರ್ಪಳೀತಂಗೆ? ವ್ಯರ್ಥಮಪ್ಪುವೆ ನನ್ನ*
*ಮಂತ್ರಾಸ್ತ್ರಗಳ್ ಕೆಮ್ಮನಿಂತು? ನಾನಿವನ*
*ಕೊಲ್ಲಲೊಂದಪ್ರಾತ್ನಿತೋಪಾಯಮಂ ಪೂಡಿ*
*ಸೋಲವೇಳ್ಪಲ್ಲದಿರೆ ಗೆಲ್ಲಲರಿಯಂ!"* [17]

ರಾಮನ ಬಾಣಗಳನ್ನು ತಡೆಯುವ ಶಕ್ತಿ ಮಂಡೋದರಿಯ ಸತಿ ಶಕ್ತಿಗಿದೆ. ರಾಮನ ಈ ನುಡಿಗಳು ಮಂಡೋದರಿಯ ಪಾತಿವ್ರತ್ಯವನ್ನು ಇನ್ನಷ್ಟು ಉಜ್ವಲಗೊಳಿಸುತ್ತವೆ. ರಾಮ ಕೊನೆಗೆ ಬ್ರಹ್ಮಾಸ್ತ್ರವನ್ನು ಹೂಡಿದಾಗ ಅದು ರಾವಣನ ವಕ್ಷಸ್ಥಲದಲ್ಲಿ ನಾಟುತ್ತದೆ. ಅದನ್ನು ರಾಮನೆಂದು ಹಿಡಿದು ಸತಿಯ ಬಳಿಗೆ ಓಡಿ ಬರುತ್ತಾನೆ. ಅದನ್ನು ಮುಟ್ಟಲು ಸೀತೆ ಮತ್ತು ಮಂಡೋದರಿ ಇಬ್ಬರಿಗೆ ಸಾಧ್ಯವೆನ್ನುತ್ತಾನೆ. ಮಂಡೋದರಿ ಅದು ರಾಮನಲ್ಲ ರಾಮಬಾಣ ಎನ್ನುತ್ತಾಳೆ. ಆದರೂ ಪತಿಯ ಅಣತಿಯನ್ನು ಮೀರಲಾರದೆ ಬಾಣ ತೆಗೆದಾಗ ರಕ್ತ ಚಿಮ್ಮಿ ಮಂಡೋದರಿಯ ಮಡಿಲಲ್ಲಿ ಪ್ರಾಣಬಿಡುತ್ತಾನೆ. ಮಹಾಸತಿ ಮಂಡೋದರಿಯು ಇಚ್ಛಾಮರಣದಿಂದ ರಾವಣನನ್ನು ಅನುಸರಿಸುತ್ತಾಳೆ.

ಕುವೆಂಪುರವರ ಮಹಾಕಾವ್ಯದಲ್ಲಿ ಮಂಡೋದರಿ ಮಹಾಶಕ್ತಿಯಾಗಿ ಪರಿವರ್ತನೆಯ ರುವಾರಿಯಾಗಿ ಮೆರೆದಿದ್ದಾಳೆ. ರಾಮಭಕ್ತ ಹನುಮಂತನೇ ಮಂಡೋದರಿಯನ್ನು ಸೀತೆ ಎಂದು ಭ್ರಮಿಸುತ್ತಾನೆ. ಕುವೆಂಪುರವರು ಹಾಗೆ ಮಂಡೋದರಿಯ ರೂಪು, ಚೆಲುವು, ಲಾವಣ್ಯವನ್ನು ಚಿತ್ರಿಸಿದ್ದಾರೆ. ಆಂತರಿಕ ಸೌಂದರ್ಯದಲ್ಲೂ ಸೀತೆಯನ್ನು ಮೀರಿ ನಿಲ್ಲುತ್ತಾಳೆ. ರಾಕ್ಷಸ ಸ್ತ್ರೀ ಎಂದರೆ ನೆನಪಾಗುವುದು ಅಸುರಿ ರೂಪು. ಆದರೆ ಇಲ್ಲಿ ಮಂಡೋದರಿ ದೇವತೆಯಾಗುತ್ತಾಳೆ. ವಾಲ್ಮೀಕಿ ರಾಮಾಯಣಕ್ಕಿಂತ ಭಿನ್ನವಾಗಿ ಇಲ್ಲಿ ಮಂಡೋದರಿ ಗುರುತಿಸಿಕೊಳ್ಳುತ್ತಾಳೆ. ಒಂದು ಹೆಣ್ಣು ತನ್ನ ಗಂಡ ಇನ್ನೊಬ್ಬ ಸ್ತ್ರೀಯನ್ನು ನೋಡಿದರೆ ಸಹಿಸಲಾರದಿದ್ದಾಗ ಇನ್ನು ಅರಮನೆಗೆ ಸ್ತ್ರೀಯನ್ನು ತಂದು ಇಟ್ಟುಕೊಳ್ಳುತ್ತಿದ್ದ ರಾವಣ. ಆ ಸಂದರ್ಭದಲ್ಲಿ ಅವಳಲ್ಲಿಟ್ಟ ಸಹನೆ, ತಾಳ್ಮೆ ನಿಜಕ್ಕೂ ಅದ್ಭುತವಾದದ್ದು. ಮಂಡೋದರಿ ರಾವಣನ ಮನೋರಾಣಿಯಾಗಿ ಇಲ್ಲಿ ರಾವಣನನ್ನು ವಿಕಾಸದತ್ತ ಕರೆದೊಯ್ಯುತ್ತಾಳೆ. ಅವನು ತನ್ನ ಭ್ರಮೆಯ ಪೊರೆಯಿಂದ ಕಳಚಿ ಊರ್ಧ್ವಗಾಮಿಯಾಗುವಂತೆ ಮಾಡುತ್ತಾಳೆ. ನಿಜಕ್ಕೂ ಕುವೆಂಪು ರಚಿತ ಮಂಡೋದರಿ ಒಂದು ಉತ್ತಮ ಪಾತ್ರವಾಗಿ ಮೂಡಿಬಂದಿದೆ.

ಮಹಾನ್ ದೈತ್ಯ ಶಕ್ತಿಯಾದ ರಾವಣ ಮಂಡೋದರಿಯ ಸತೀತ್ವದ ಮುಂದೆ ಬಾಗುತ್ತಾನೆ. ಹಾಗೂ ಮನಃಪರಿವರ್ತನೆ ಮಾಡಿಕೊಳ್ಳುತ್ತಾನೆ. ಈ ಎಲ್ಲದಕ್ಕೂ ಕಾರಣ ಅವನ ಮನಃಪ್ರಿಯೆಯಾದ ಮಂಡೋದರಿಯ ಸಾತ್ವಿಕ ಗುಣವು ಒಂದು ಕಾರಣವಾದರೆ ಅವಳ ದೃಢನಿಷ್ಠೆ ಹಾಗೂ ತಪಸ್ಸು ಇನ್ನೊಂದು ಕಾರಣವಾಗುತ್ತದೆ. ಹೀಗೆ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ ಪ್ರಮುಖ ಸ್ಥಾನವನ್ನು ಮಂಡೋದರಿಯು ಪಡೆದುಕೊಂಡಿದ್ದಾಳೆ.

## ಅಡಿ ಟಿಪ್ಪಣಿ

1. ಗಂಗೋತ್ರಿ, ಗೀತಾ ಬುಕ್ ಹೌಸ್, ಮೈಸೂರು, ಪು. 420
2. ಶ್ರೀ ರಾಮಾಯಣ ದರ್ಶನಂ, ಕಿಷ್ಕಿಂದಾ ಸಂಪುಟ, ಪು. 213
3. ಅದೇ, ಪು. 327
4. ಅದೇ , ಪು. 328
5. ಶ್ರೀ ರಾಮಾಯಣ ದರ್ಶನಂ, ಪು. 339
6. ಶ್ರೀ ರಾಮಾಯಣ ದರ್ಶನಂ, ಕಿಷ್ಕಿಂದಾ ಸಂಪುಟ, ಪು. 328
7. ಅದೇ, ಪು. 330
8. ಅದೇ, ಪು. 331
9. ಅದೇ , ಪು. 336
10. ಶ್ರೀ ರಾಮಾಯಣ ದರ್ಶನಂ, ಪು. 342
11. ಶ್ರೀ ರಾಮಾಯಣ ದರ್ಶನಂ, ಲಂಕಾ ಸಂಪುಟ, ಪು. 459
12. ಶ್ರೀ ರಾಮಾಯಣ ದರ್ಶನಂ, ಕನಕ ಲಂಕಾನ್ವೇಷಣಂ, ಪು. 460
13. ಗಂಗೋತ್ರಿ , ಮೈಸೂರು, ಪು. 423
14. ಶ್ರೀ ರಾಮಾಯಣ ದರ್ಶನಂ, ಲಂಕಾ ಸಂಪುಟ, ಪು. 726
15. ಅದೇ, ಪು. 768
16. ಅದೇ, ಪು. 768
17. ಅದೇ, ಪು. 794

### ಉ. ಅಹಲ್ಯೆ : ತಪೋನೆಲೆಯ ವಿಕಾಸ

ಅಹಲ್ಯೆ ತಪೋನೆಲೆಯ ಮೂಲಕ ತನ್ನ ವಿಕಾಸವನ್ನು ಕಾಣುತ್ತಾಳೆ. ಅಹಲ್ಯೆ ಪಂಚಮಹಾಪತಿವ್ರತೆಯರಲ್ಲಿ ಅಗ್ರಸ್ಥಾನವನ್ನು ಪಡೆದಿದ್ದಾಳೆ. ಅಹಲ್ಯೆ ಗೌತಮ ಮಹರ್ಷಿಯ ಪತ್ನಿ, ಅಹಲ್ಯೆ ಗಂಡನಿಂದ ವರ್ಜಿತಳಾದ ಒಂದು ಹೆಣ್ಣು. ಇಲ್ಲಿ ಅವಳು ಕಾಯುವಿಕೆಯೇ ತಪಸ್ಸಾಗಿದೆ. "ವಾಲ್ಮೀಕಿ ರಾಮಾಯಣದಲ್ಲಿ ಅಹಲ್ಯೆ – ಇಂದ್ರರ ಪ್ರಸಂಗ ಯಾವುದೇ ಭಾವಾವೇಶದ ಸಂಘರ್ಷಗಳ ಸಂಕೀರ್ಣತೆಗಳ ಚಿತ್ರಣವಾಗಿರದೆ ತುಂಬ ಸರಳ ಮತ್ತು ನೇರವಾದ ಕಥೆಯ ರೂಪದಲ್ಲಿ ಬಂದು ಹೋಗುತ್ತದೆ. ಅಹಲ್ಯೆ ಒಂದು ಉದ್ಧಾರದ ಕಥೆಯಾಗಿ ಪುಣ್ಯ ಪುರುಷ ಶ್ರೀ ರಾಮನ ಮಹಿಮೆಯನ್ನು ಕೊಂಡಾಡುವ ಒಂದು ವೃತ್ತಾಂತವಾಗಿ ರಾಮಾಯಣದಲ್ಲಿ ನಿರೂಪಿತಗೊಂಡಿದೆ"[1] ಶ್ರೀ ರಾಮಾಯಣ ದರ್ಶನಂನಲ್ಲಿ 'ಅಹಲ್ಯೆ' ಯು ಕಲ್ಲಾಗಿ ರಾಮನ ಬರುವಿಕೆಗಾಗಿ ಕಾದು ಕುಳಿತಿರುವ ತಪಸ್ವಿನಿ.

ಅಹಲ್ಯೆ ರೂಡಿಗತ ಮೌಲ್ಯಗಳನ್ನು ಮೀರುತ್ತಾಳೆ. ಶಾಪಗ್ರಸ್ತೆಯಾಗಿ, ಶಿಲೆಯಾಗಿ ತಪಸ್ಸನ್ನಾಚರಿಸಿ ಸ್ವಾಭಿಮಾನವನ್ನು ಮೆರೆದಿದ್ದಾಳೆ. ಇಂದ್ರನ ಮೋಸದಿಂದ ಬಲಿಯಾದ ಈಕೆಗೆ ಶ್ರೀರಾಮನಿಂದ ಹೊಸ ಅಸ್ತಿತ್ವ ದೊರೆಯುತ್ತದೆ. ರಾಮ ಇಲ್ಲಿ ನಮಗೆ ಒಬ್ಬ ಸ್ತ್ರೀ ವಾದಿಯಂತೆ ಕಾಣುತ್ತಾನೆ. ಅಹಲ್ಯೆ ತನಗೆ ತಾನು ಕಂಡುಕೊಳ್ಳುವ ಹೊಸ ಅಸ್ತಿತ್ವ ಸ್ತ್ರೀವಾದದಲ್ಲೇ ಬಹುಮುಖಿನೆಲೆಗಳನ್ನು ಪಡೆದುಕೊಳ್ಳುತ್ತದೆ. ಅಹಲ್ಯೆಗೆ ಗಂಡನಿಂದ ಅವಮಾನವಾಯಿತೆಂಬ ಅಳುಕಿಲ್ಲ ಹಾಗೂ ತನ್ನ ಸ್ಥಿತಿಯ ಬಗ್ಗೆ ಮರುಕುವೂ ಇಲ್ಲ. ಬದಲಾಗಿ ತನ್ನ ಅಸ್ತಿತ್ವವನ್ನು ಕಟ್ಟಿಕೊಳ್ಳುವುದಕ್ಕಾಗಿ ಕಾತರತೆ, ನಿರೀಕ್ಷೆಗಳು ಇರುವುದು ಮುಖ್ಯವಾಗುತ್ತದೆ.

"ಅಹಲ್ಯೆ, ನಾಟಕದಲ್ಲಿ ಗಂಡು ಹೆಣ್ಣಿನ ದಿನದ ಬಾಳ್ವೆಯ ರೂಢಿಯನ್ನು ಭಗ್ನಗೊಳಿಸುವ, ಅದನ್ನು ಧಿಕ್ಕರಿಸುವ ಶಕ್ತಿಯಾಗಿ ಕಾಮ ಚಿತ್ರಿತವಾಗಿದೆ. ಹುಚ್ಚು ಹೊಳೆಯಂತೆ ತೋರುವ ಅದರ ಉಬ್ಬರ, ಉತ್ಕರ್ಷ ಹಾಗೂ ಹೆಣ್ಣು – ಗಂಡುಗಳನ್ನು ಪರಸ್ಪರ ಆಕರ್ಷಿಸಿ ಸ್ಥಾನಭ್ರಷ್ಟರನ್ನಾಗಿಸುವ ಅದರ ಶಕ್ತಿಯನ್ನು ಪು.ತಿ.ನ ರವರು ಬಣ್ಣಿಸಿದ್ದಾರೆ."[2]

'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ ವಿಶ್ವಾಮಿತ್ರ ಮಹರ್ಷಿ, ರಾಮ ಲಕ್ಷ್ಮಣರೊಡಗೂಡಿ ಸುಬಾಹು ಮಾರೀಚ ಮುಂತಾದ ರಾಕ್ಷಸರನ್ನು ಸಂಹರಿಸಿ ಕಾಡಿನಲ್ಲಿ ಬರುತ್ತಿದ್ದಾಗ ದಾರಿ ತಪ್ಪುತ್ತಾರೆ. ಅವರು ನೀರವತೆಯೇ ಮೂರ್ತಿವೆತ್ತಂತೆ, ನೋವು ಯಾತನಾ ಸಹಿತವಾದ ಒಂದು ಕ್ಷೇತ್ರಕ್ಕೆ ಕಾಲಿಡುತ್ತಾರೆ.

*"ಗೌತಮ ಮಹಾಮುನಿಯ ಶಾಪದಿನಹಲ್ಯೆ ತಾಂ*
*ವರ್ಷ ಶತಮಾನಗಳಿಂದೆ ಜಡರೂಪದಿಂ*
*ನಿಷ್ಠುರ ಶಿಲಾತಪಸ್ವಿನಿಯಾಗಿ ಕನಿಕರದ*
*ಕಣ್ಗೆ ಬಾಹಿರೆಯಾಗಿ ಜಗದ ನಿರ್ದಾಕ್ಷಿಣ್ಯ*
*ವಿಸ್ಮೃತಿಗೆ ತುತ್ತಾಗಿ, ವಜ್ರಮೌನದ ಅಚಿನ್*
*ನಿದ್ರೆಯಿಂದೆಚ್ಚರುವ ಬಯಕೆಯಿಂದೊರಗಿರ್ದ ಸುಕ್ಷೇತ್ರಮಂ"*[3]

ಹೀಗೆ ಕುವೆಂಪುರವರು ಶಿಲಾ ತಪಸ್ವಿಯ ಪರಿಸರದ ಚಿತ್ರಣವನ್ನು ಹಾಗೂ ಅಹಲ್ಯೆಯ ಸ್ಥಿತಿಯನ್ನು ಕಣ್ಣಿಗೆ ಕಟ್ಟುವ ಹಾಗೆ ಕೊಡುತ್ತಾರೆ.

ಕನಿಕರದ ಕಣ್ಣಿಗೆ ಹೊರತಾಗಿ ಯಾರಿಗೂ ಅಹಲ್ಯೆ ಗೋಚರಾತೀತೆ. ರಾಮ ಆ ಕ್ಷೇತ್ರಕ್ಕೆ ಕಾಲಿಟ್ಟದುದೆ ತಡೆ ಅವನು ಒಂದು ರೀತಿಯ ನೋವನ್ನು ಅನುಭವಿಸುತ್ತಾನೆ. ಅವನ ಕಣ್ಣುಗಳಿಂದ ನೀರು ತಾನಾಗೇ ಹರಿಯತೊಡಗುತ್ತದೆ. ಇಡೀ ಪ್ರಾಣಿ ಪಕ್ಷಿ ಗಿಡ ಮರಗಳಿಂದ ಕೂಡಿದ ವನವು ಅಹಲ್ಯೆಯ ನೋಪಿಗೆ ಕನ್ನಡಿ ಹಿಡಿದಂತಿದೆ. ತನ್ನ ತಾಯಿ ಕೌಸಲ್ಯೆ ಗೋಳಿಟ್ಟು ಕರೆದಂತಾಗುತ್ತದೆ. ಕರುಳ ಸಂಬಂಧಕ್ಕೂ ಮೀರಿದ ಅಹಲ್ಯೆಯ ದುಃಖಕ್ಕೆ ಸಮನಾಗಿ ಮಾತೃಹೃದಯಿ ರಾಮ ಅನುಭವಿಸುತ್ತಾನೆ. ತನಗೆ ಅರಿವಿಲ್ಲದಂತೆ ನರ್ತಿಸತೊಡಗುತ್ತಾನೆ. ಋಷಿಯ ಶಾಪವೇ ಕವಚವೆಂಬಂತೆ ಇದ್ದ ಹುಲಿ ಇಳಿದುಹೋಗುತ್ತದೆ. ರಾಮನ ಪಾದಸ್ಪರ್ಶದಿಂದ ಅಹಲ್ಯೆ ಶಿಲೆಯಿಂದ ಮುಕ್ತಿ ಪಡೆಯುತ್ತಾಳೆ. ಈ ಮಹಾಕಾವ್ಯದಲ್ಲಿ ಪ್ರತಿಯೊಂದು ಜೀವಿಯು ವಿಕಾಸದ ಕಡೆ ಚಲಿಸುತ್ತದೆ. ಅಹಲ್ಯೆ ಇಲ್ಲಿ ತನ್ನ ಅಸ್ತಿತ್ವವನ್ನು ಮತ್ತೆ ಸ್ಥಾಪಿಸಿಕೊಳ್ಳುವುದಕ್ಕಾಗಿ ಶಾಪವನ್ನೇ ಅಸ್ತ್ರವಾಗಿಟ್ಟುಕೊಂಡು ಅದರ ಮೂಲಕವೇ ತಾನು ಪತಿವ್ರತೆ ಎಂಬುದನ್ನು ಮತ್ತೊಮ್ಮೆ ರುಜುವಾತುಪಡಿಸುತ್ತಾಳೆ. ಕಲ್ಲಾಗಿ ವ್ರತವನ್ನು ಸಾಧಿಸತಾಳೆ. 'ಅಹಲ್ಯೆ' ಯದು ಅತೃಪ್ತ ಕಾಮವಾದರೆ ಗೌತಮನದು ಅಧಿಕಾರ ಕಾಮದ ಲಾಲಸೆ"[4] ಅಹಲ್ಯೆ ಒಂದು ರೀತಿಯ ಇಕ್ಕಟ್ಟಿನ ಪರಿಸ್ಥಿತಿಯನ್ನು ಎದುರಿಸಬೇಕಾಯಿತು. ಗೌತಮನು ಆಧ್ಯಾತ್ಮ, ದರ್ಶನ ಇವುಗಳನ್ನು ಅರಸಿ ಹೊರಟರೆ ಅಹಲ್ಯೆ ಇವೆಲ್ಲವನ್ನು ಒಪ್ಪಿಕೊಳ್ಳಲು ಆಗದೆ ವಿರೋಧಿಸಲೂ ಆಗದೆ ಇಬ್ಬದಿಯ ತೋಳಲಾಟಕ್ಕೆ ಅಹಲ್ಯೆ ಸಿಲುಕುತ್ತಾಳೆ. ಈ ಒಂದು ದುರ್ಬಲ ಮನಸ್ಥಿತಿಯಲ್ಲಿ ಇಂದ್ರನ ಮೋಹಕ್ಕೆ ವಶಳಾಗಿದ್ದಳು. ಮಾನಸಿಕ ಸಂಘರ್ಷದಲ್ಲಿ ನಿರತಳಾಗಿದ್ದ ಅಹಲ್ಯೆಗೆ ತಾನು ಏನನ್ನು ಆಯ್ಕೆ ಮಾಡಿಕೊಳ್ಳಬೇಕೆನ್ನುವಷ್ಟರಲ್ಲಿ ಶಾಪಕ್ಕೆ ಗುರಿಯಾಗುತ್ತಾಳೆ.

"ಲಿಂಗಾಧಾರಿತ ರಾಜಕಾರಣದಲ್ಲಿ ಪುರುಷಾಧಿಕಾರವು ಹೆಣ್ಣು ಜಗತ್ತಿನ ಮೇಲೆ ವಿಸ್ಮೃತಿ ಹೇರುವುದನ್ನು ಹೆಣ್ಣು - ಗಂಡಿನ ಸಂಬಂಧದಲ್ಲಿ ವೈರುದ್ಯಗಳನ್ನು ರೂಪಿಸುವ, ತಿರುಚುವ ಶಕ್ತಿಗಳನ್ನು ಮನಃಶಾಸ್ತ್ರಜ್ಞ ಎರಿಕ್ ಪ್ರಾಮ್ಸ್ ಪರ್ಮನೆಂಟ್ ಡ್ರೈವ್ಸ್ ಎಂದು ಕರೆದಿದ್ದಾನೆ."[5]

ಅಹಲ್ಯೆಯು ತನ್ನ ವ್ಯಕ್ತಿತ್ವ ವಿಕಾಸ, ಸ್ವಂತಿಕೆ ಹಾಗೂ ಅಸ್ತಿತ್ವವನ್ನು ಕಟ್ಟಿಕೊಳ್ಳಲು ಇಲ್ಲಿ ಬಯಸಿದ್ದಾಳೆ. ರಾಮ ಪ್ರತೀತಿವಾದ ಶಾಪವಿಮೋಚನೆಗಾಗಿ ಕಾದಿದ್ದಳು. ಆದರೆ ಗೌತಮನದು ಇದಕ್ಕೆ ವಿರುದ್ಧ ಮುಖ ಅಧಿಕಾರ ವ್ಯಾಮೋಹ, ಮಹತ್ವಾಕಾಂಕ್ಷೆ, ದರ್ಪ ಇವುಗಳ ಮೂಲಕ ಲೌಕಿಕವಲ್ಲದ ಸ್ಥಿತಿಗೆ ಹಾತೊರೆಯುತ್ತಾನೆ.

ಕುವೆಂಪುರವರ ದರ್ಶನ ಮತ್ತು ಅರವಿಂದರ ದರ್ಶನಕ್ಕೂ ಸಾಮ್ಯ ಇದೆ ಎಂದು ಗುರುತಿಸಬಹುದು. ಅಹಲ್ಯೆಯ ಪಾತ್ರ ನಿರ್ಮಾಣದಲ್ಲೂ ದರ್ಶನದ ಪಾತ್ರ ಬಹುಮುಖ್ಯವಾಗುತ್ತದೆ. ವಾಲ್ಮೀಕಿಯದ್ದು. ಒಂದು ರೀತಿಯ ದರ್ಶನವಾದರೆ ಕುವೆಂಪುರವರು ಕಟ್ಟಿಕೊಡುವ ದರ್ಶನ ಅದಕ್ಕಿಂತ ಭಿನ್ನವಾಗಿರುತ್ತದೆ. ವಾಲ್ಮೀಕಿಯೂ ಮಹಾ ತಪಸ್ವಿ ಅವರು ತಮ್ಮ ಪಾತ್ರಗಳಿಗೆ ದರ್ಶನದ ಕಾಣ್ಕೆಯನ್ನು ಬೆರಸಿ ಇನ್ನೊಂದು ಸ್ಪಷ್ಟರೂಪ ಕೊಡುತ್ತಾರೆ. ಕುವೆಂಪು ಕಂಡುಕೊಂಡ ದರ್ಶನದಿಂದ ಅಹಲ್ಯೆಗೂ ಮಹತ್ವದ ಸ್ಥಾನ ಸಿದ್ಧಿಸಿದೆ. ಸ್ತ್ರೀಯನ್ನು ದೇವತೆ ಎಂದು ಹೇಗೆ ಪೂಜ್ಯೆ

ಭಾವನೆಯನ್ನು ಒಪ್ಪಿಕೊಳ್ಳುತ್ತೇವೋ ಹಾಗೆ ಆಕೆಯ ಮೇಲಿನ ದೌರ್ಜನ್ಯವನ್ನು ಒಪ್ಪಿಕೊಳ್ಳುವಂತಾಗಬಾರದು. ಅಹಲ್ಯೆಯಂತ ಮಹಾ ಪತಿವ್ರತೆ ಕಲ್ಲಾಗುವುದೆಂದರೆ ಅದು ಸಾಮಾನ್ಯದ ಮಾತಾಗುವುದಿಲ್ಲ. ಅದರಲ್ಲಿ ದರ್ಶನದ ಸತ್ವ ಅಡಗಿದೆ ಎಂದು ಆ ಮೂಲಕ ನಾವು ತಿಳಿಯಬಹುದು.

"ಚೇತನ ಕಲ್ಲಾದ ಮಾತ್ರಕ್ಕೆ ಅದರ ಸ್ವಭಾವ, ಸ್ವಗುಣ ಸಂಪೂರ್ಣ ಅಳಿಯಿತೆಂದಲ್ಲ. ವ್ಯಕ್ತವಾಗಿದ್ದ ಚೇತನ, ಅವ್ಯಕ್ತವಾಗಿ, ಸುಪ್ತವಾಗಿ ಜಡದಲ್ಲಿ ನಿದ್ರಿಸುತ್ತಿರುತ್ತದೆ."[6] ಅದನ್ನು ಕುವೆಂಪುರವರ ಮಾತಿನಲ್ಲೇ ನೋಡಬಹುದು:

*"ಕಲ್ಲಾದರೇನ್?*
*ತೀವ್ರತಪದಿಂದ ಚೇತನ ಸಿದ್ಧಿಯಾಗದೇಂ*
*ಜಡಕೆ? ಕಲ್ಲಾದ ಪೆಣ್ಣರಕೆ ತಾಂ ಕಾಶಿಕತೆ*
*ಒಟ್ಟೆದಪ್ಪಿಸಿ ಸೆಳೆಯದೇನಿಹುದೆ. ಪೇಳ್, ಚರಣಮಂ ಶ್ರೀ ರಾಮನಾ?"*[7]

ಅರವಿಂದರ ದರ್ಶನದ ಸಾರವೇ ಶಿಲಾತಪಸ್ವಿಯಾಗಿ ಮೂರ್ತಿವೆತ್ತಂತೆ ರಚಿತವಾಗಿದೆ. ಕಲ್ಲಾಗಿ ಬಿದ್ದಿದ್ದ ಅಹಲ್ಯೆಗೆ ಅವಳ ತಪಸ್ಸಿನಿಂದ ಶ್ರೀ ರಾಮ ತನಗರಿವಿಲ್ಲದೇ ಬಂದು ಪಾದ ಸ್ಪರ್ಶಿಸಿ ಮುಕ್ತಿಯನ್ನು ಕೊಡುತ್ತಾನೆ. ಇಲ್ಲಿ ಇನ್ನೊಂದು ಅಂಶವು ಮುಖ್ಯವಾಗುತ್ತದೆ. ಕಲ್ಲಾಗಿ ಬಿದ್ದಿದ್ದ ಅಹಲ್ಯೆಗೆ ಚೇತನವನ್ನು ಪುನರ್‌ಸ್ಥಾಪಿಸಿದ ಮೇಲೆ ಜಗತ್ತಿನಲ್ಲಿ ಇರುವ ಸಕಲ ಜೀವಿಗಳಲ್ಲೂ ಇರುವ ದುಷ್ಟತನವನ್ನು ನೀಗಿ ಪ್ರಭಾವ ಮಾತ್ರದಿಂದಲೇ ದೈವೀ ಅಂಶಗಳನ್ನು ಸ್ಥಾಪಿಸುವಂತಹ ಶಕ್ತಿ ಶ್ರೀರಾಮನಲ್ಲಿದೆ ಎಂದು ತಿಳಿಯಬಹುದು ಮತ್ತು ಸ್ತ್ರೀಯರಿಗೆ ಅಸ್ತಿತ್ವವನ್ನೂ, ಸ್ಥಾನವನ್ನು ಕೊಡಬೇಕು ಎಂಬ ಕುವೆಂಪುರವರ ಸ್ತ್ರೀವಾದ ಚಿಂತನೆಯನ್ನು ಗುರುತಿಸಬಹುದು.

"ಸ್ತ್ರೀವಾದಿ ನೆಲೆಯಲ್ಲಿ ನೋಡಿದರೆ, ಅಹಲ್ಯೆ ರೂಢಿಗತ ಮೌಲ್ಯಗಳನ್ನು, ಪುರುಷ ಪ್ರಧಾನ ಸಮಾಜವನ್ನು, ಗಂಡನೆಂಬ ಭಕ್ತಿ ಭಾವ ಹಾಗೂ ಸಮಾಜದ ಕಟ್ಟು ಕಟ್ಟಳೆಗಳನ್ನು, ಪಾರಂಪರಿತ ಮೌಲ್ಯಗಳನ್ನು ಧಿಕ್ಕರಿಸಲು ಲೈಂಗಿಕತೆಯಂತಹ ಪ್ರಬಲ ಅಸ್ತ್ರವೊಂದನ್ನು ಬಳಸಿಕೊಂಡಂತೆ ಕಾಣುತ್ತದೆ. ಇದರಿಂದಾಗಿ ಪಾರಂಪರಿಕವಾದ ರೂಢಿಗತ ಮೌಲ್ಯಗಳನ್ನು ಧಿಕ್ಕರಿಸಿ ಅಹಲ್ಯೆ ಬೆಳೆಯಲೆತ್ನಿಸುತ್ತಾಳೆ"[8] ಗೌತಮ ಮುನಿಯಿಂದ ಶಾಪಗ್ರಾಸ್ತೆಯಾದಾಗ ಅವಳ ಹುಡುಗಾಟಕ್ಕೆ ಸ್ಪಷ್ಟದಾರಿ ಸಿಗುತ್ತದೆ. ತಪಸ್ಸಿನ ಮೂಲಕ ತನ್ನ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾಳೆ. ತಪಸ್ಸಿನ ಮನೋಭೂಮಿಕೆಯನ್ನು ಕುರಿತು ಕಾದಂಬರಿ ಕಾವ್ಯದ ಬಗ್ಗೆ ಹೀಗೆ ಹೇಳುತ್ತಾರೆ. "ಶೃಂಗಾರಕ್ಕೆ ತಪಸ್ಸು ಸಾಧನರಂಗವಾಗಿದೆ. ಅಲ್ಲಿ ಘಟನಾಪರಂಪರೆಗಳ ಅಟ್ಟಹಾಸಕ್ಕಿಂತಲೂ ಅನುಭೂತಿಯ ದೀರ್ಘತೆಯ ಉಜ್ವಲವಾಗಿದೆ. ಅಲ್ಲಿ ಕೌತುಕದ ಘಟನೆಗಳಿಗೇನೂ ಕಡಿಮೆಯಿಲ್ಲ. ಆದರೆ ಆ ಘಟನೆಗಳ ಚಲನೆ ಹೃದಯಾನುಭವ ಮನೋವೇದನೆಯ, ವ್ರತಪೂರ್ಣ ತಪಸ್ಸಿನ ನಿಶ್ಚಲತೆಯಲ್ಲಿ ಸಮಾಧಿ ಹೊಂದಿದೆ."[8] ತಪ್ಪಸ್ಸೇನ್ನುವುದು ಒಂದು ಸಾಧನೆಯಾಗಿದೆ ಹಾಗೂ ತನ್ನ ಅಸ್ತಿತ್ವವನ್ನು ಕಟ್ಟಿಕೊಳ್ಳುವ ಮನೋವೇದಿಕೆ, ಯಾಗ ಎಂಬುದನ್ನು ಕುವೆಂಪುರವರು ತರುತ್ತಾರೆ.

ಅಹಲ್ಯೆಯ ಈ ತಪಸ್ಸೆಂಬ ಸಾಧನದಿಂದ ತನ್ನ ಅಸ್ತಿತ್ವವನ್ನು ಕಟ್ಟಿಕೊಳ್ಳಲು ಯತ್ನಿಸುತ್ತಾಳೆ. ಅವಳ ಎಲ್ಲ ಮನೋವೇದನೆಗಳನ್ನು ಅಲಹ್ಯೆ ಇದ್ದಂತ ಪರಿಸರದ ಮೂಲಕ ಕುವೆಂಪುರವರು ಕೊಡುತ್ತಾರೆ:

*"ಪಾಂಥರ್ಗೆ ಗೋಚರಿಸಿತೊಂದು ಋಷಿವನ ಸದೃಶ ಕಾನನಂ*
*ಪೊಕ್ಕರದನೇನೆಂಬೆನಾ ಮಹಾ ಶಕುನಮಯ*
*ದುಃಖಗರ್ಭಿತ ಮೌನಮಂ! ಹಾಡಿದಿವೆ ಹಕ್ಕಿ.*
*ನಲಿದಾಡದಿವೆ ಮಿಗಂ ಸಂಚರಿಸದಿದೆ ಗಾಳಿ*
*ತನಿಗಂಪನೀಯದಿವೆ ಮರಗೋಡಿನೊಳ್ ಮಲರ್*
*ಚಲಿಸವೆಲೆ ಪುಲ್ಲೆಸಳ್, ಆವ ದುಃಖವೊ ಅಲ್ಲಿ*
*ಕೊನೆಗಾಣದಂತಮಂ ದಿನಮುಂ ನಿರೀಕ್ಷಿಪೊಲ್*
*ಮೂಗುವಟ್ಟಿರ್ದ ಬನಮೆಸೆದುದಾ ಪಥಿಕರ್ಗೆ*
*ಬರೆದಂತೆ ನೀರವಂ, ಕೊರೆದಂತೆ ನಿಶ್ಚಲಂ*
*ನಿಶ್ಯಬ್ದತಾ ಕುಂಭಕಸ್ಥಿತಿಯ ಯತಿನಾದದೋಲ್"*

ಕಲ್ಲಾಗಿದ್ದ ಅಹಲ್ಯೆಯ ಮನೋರಂಗದ ಎಲ್ಲ ಭಾವಗಳನ್ನು ಅಹಲ್ಯೆ ಇದ್ದ ಪರಿಸರವು ಅನಾವರಣಗೊಳಿಸುತ್ತಿವೆ. ನಿಸರ್ಗದ ಒಂದು ಭಾಗವಾಗಿ ಕಲ್ಲಾಗಿದ್ದ ಅಹಲ್ಯೆಗೆ ಪ್ರಕೃತಿಯೇ ತಪೋನೆಲೆಯಾಗಿ ಅವಳ ತಪಸ್ಸಿಗೆ ಒಂದು ನೆಲೆಯನ್ನು ಕಲ್ಪಿಸಿಕೊಟ್ಟಿದೆ. ಕಾಡಿನಲ್ಲಿ ದಾರಿ ತಪ್ಪಿದ ರಾಮನು ಗೌತಮ ಮುನಿಯ ಕ್ಷೇತ್ರಕ್ಕೆ ತನಗೆ ಅರಿವಿಲ್ಲದಂತೆ ಬರುತ್ತಾನೆ. ತನ್ನ ಇಹವನ್ನು ಮರೆತ ರಾಮ ಶಿಲೆಯಾಗಿದ್ದ ಅಹಲ್ಯೆಯನ್ನು ಪಾದಸ್ಪರ್ಶ ಮಾಡಿದಾಗ ಅಹಲ್ಯೆಗೆ ಹೊಸ ಅಸ್ತಿತ್ವ ದೊರಕುತ್ತದೆ. ಅವಳು ಶ್ರೀ ರಾಮನ ಪಾದಗಳಿಗೆ ನಮಸ್ಕರಿಸುತ್ತಾಳೆ. ರಾಮನು ಸಹ ಹೆತ್ತ ತಾಯಿಯನ್ನು ಕಂಡಂತೆ ಹರ್ಷಿಸುತ್ತಾನೆ. ಇದನ್ನು ವಾಲ್ಮೀಕಿ ರಾಮಾಯಣದಲ್ಲಿ ನಾವು ಕಾಣಲಾಗುವುದಿಲ್ಲ. ಆದರೆ ಕುವೆಂಪುರವರ ಮಹಾಕಾವ್ಯದಲ್ಲಿ ಇದು ವಿಶೇಷವಾಗಿ ಮೂಡಿಬಂದಿದೆ.

ಪಂಚಮಹಾಪತಿವ್ರತೆಯರಲ್ಲಿ ಅಹಲ್ಯೆಯು ಅಗ್ರಸ್ಥಾನವನ್ನು ಪಡೆದಿದ್ದಾಳೆ. ಹೆಂಗಸರು ವಿವಾಹ ಬಂಧನದಲ್ಲಿ ಒಬ್ಬ ಗಂಡಸಿನ ಅಧೀನವಾಗಬೇಕು ಎಂಬ ನಿಯಮಕ್ಕೆ ವಿರುದ್ಧವಾದ ಸಂದರ್ಭದಲ್ಲಿ ಅಹಲ್ಯೆಯ ವ್ಯಕ್ತಿತ್ವ ಪರಿಚಯವಾಗುತ್ತದೆ. ಪರಂಪರೆಗೆ ವಿರುದ್ಧವಾಗಿ ನಡೆದು ತನ್ನ ಅಸ್ತಿತ್ವವನ್ನು ಕಟ್ಟಿಕೊಳ್ಳಲು ಪ್ರಯತ್ನಿಸುವ ಹೆಣ್ಣಾಗಿ ಇಲ್ಲಿ ಅಹಲ್ಯೆಯು ಮೂಡಿ ಬಂದಿದ್ದಾಳೆ. ಪಂಚ ಕನ್ಯೆಯರಾದ ಅಹಲ್ಯ, ದ್ರೌಪದೀ, ತಾರಾ, ಕುಂತಿ, ಮಂಡೋದರಿ ಇವರುಗಳು ಎಂಥ ಸಂದರ್ಭದಲ್ಲೂ ಆತ್ಮವಿಕಾಸವನ್ನು ಕಳೆದುಕೊಂಡವರಲ್ಲ. ಬದಲಾಗಿ ಸಮಾಜವು ಅಪರಾಧಿ ಸಾಧನದಲ್ಲಿ ಇವರನ್ನು ನಿಲ್ಲಿಸಿದಾಗಲೂ ಅಪರಾಧಿ ಪ್ರಜ್ಞೆಗೆ ತಮ್ಮನ್ನು ಒಳಗು ಮಾಡಿಕೊಳ್ಳದೆ ದಿಟ್ಟವಾಗಿ ಸಮಾಜವನ್ನು ಎದುರಿಸಿದವರು.

ಅಹಲ್ಯೆಯು 'ಶ್ರೀ ರಾಮಯಣದರ್ಶನಂ' ಮಹಾಕಾವ್ಯದಲ್ಲಿ ಜಡಶಿಲೆಯಿಂದ ಹೊಸ ಅಸ್ತಿತ್ವವನ್ನು ಕಂಡುಕೊಳ್ಳುವುದರತ್ತ ತುಡಿಯುವ, ಆತ್ಮವಿಶ್ವಾಸ ತುಂಬಿದ ಹಾಗೂ ಸಾತ್ವಿಕ ತಪೋನೆಲೆಯುಳ್ಳ ಸ್ತ್ರೀಯಾಗಿ ನಿರೂಪಿತಳಾಗಿದ್ದಾಳೆ. ಪುರುಷ ಸಮಾಜದ ಎಲ್ಲ ಒತ್ತಡಗಳಿಂದ ಮುಕ್ತಳಾಗಿ ಸ್ವಂತಿಕೆಯನ್ನು ಮೆರೆದಿದ್ದಾಳೆ.

## ಅಡಿ ಟಿಪ್ಪಣಿ

1. ಆಧುನಿಕ ಕನ್ನಡ ನಾಟಕಗಳಲ್ಲಿ ಪ್ರಭುತ್ವ, ಯಾಜಮಾನ್ಯ ಹಾಗೂ ಅಧಿಕಾರ ಕೇಂದ್ರಗಳ ಪ್ರತಿನಿಧೀಕರಣ – ಒಂದು ವಸ್ತುನಿಷ್ಠ ಅಧ್ಯಯನ ಡಾ॥ ಟಿ.ವೆಂಕಟೇಶಮೂರ್ತಿ ಪಿ. ಹೆಚ್.ಡಿ. ಮಹಾಪ್ರಬಂಧ ಹಂಪಿ 2005, ಪು. 132
2. ಅದೇ, ಪು. 136
3. ಅಯೋಧ್ಯಾ ಸಂಪುಟ, ಪು. 48
4. ಆಧುನಿಕ ಕನ್ನಡ ನಾಟಕಗಳಲ್ಲಿ ಪ್ರಭುತ್ವ, ಯಾಜಮಾನ್ಯ ಹಾಗೂ ಅಧಿಕಾರ ಕೇಂದ್ರಗಳ ಪ್ರತಿನಿಧೀಕರಣ – ಒಂದು ವಸ್ತುನಿಷ್ಠ ಅಧ್ಯಯನ, ಪು. 39
5. ಅದೇ, ಪು. 139
6. ಶ್ರೀ ರಾಮಾಯಣ ದರ್ಶನಂ, ಮಹಾಕಾವ್ಯ ಸಮೀಕ್ಷೆ ಕೋ. ಚನ್ನಬಸಪ್ಪ ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು 1999, ಪು. 47
7. ಶ್ರೀ ರಾಮಾಯಣ ದರ್ಶನಂ, ಪು. 39
8. ಆಧುನಿಕ ಕನ್ನಡ ನಾಟಕಗಳಲ್ಲಿ ಪ್ರಭುತ್ವ, ಯಾಜಮಾನ್ಯ ಹಾಗೂ ಅಧಿಕಾರ ಕೇಂದ್ರಗಳ ಪ್ರತಿನಿಧೀಕರಣ – ಒಂದು ವಸ್ತುನಿಷ್ಠ ಅಧ್ಯಯನ, ಪು. 140
9. ಅಯೋಧ್ಯಾ ಸಂಪುಟ, ಪು. 98

## ಊ. ಶಬರಿ : ಸೇವೆಯ ಅತ್ಯುನ್ನತ ನೆಲೆ

ಶಬರಿ ತನ್ನ ಗುರುವಾದ ಮಾತಂಗಮುನಿಯ ಮಾತಿಗೆ ಬದ್ಧಳಾಗಿ ರಾಮನ ಬರುವಿಕೆಗಾಗಿ ಇಡೀ ಜೀವನವನ್ನೇ ಕಾಯುವಿಕೆಯಲ್ಲಿ ಸವೆಸಿದ ತಪಸ್ವಿನಿ. ರಾಮನನ್ನು ಸದಾ ಧ್ಯಾನಿಸುವ ಕಾಡ ಬೇಡರ ವೃದ್ದೆ ಈ ಶಬರಿ. ರಾಮನು ವನವಾಸದ ಸಮಯದಲ್ಲಿ ಶಬರಿಯ ಕುಟೀರಕ್ಕೆ ಬರುತ್ತಾನೆ. ತಾನು ಕಾದಿದ್ದ ದೈವ ಪುರುಷ ಬಂದಾಗ ಆತನನ್ನು ಅತಿ ಸಂತೋಷದಿಂದ ಸ್ವಾಗತಿಸುತ್ತಾಳೆ. ಹಾಗೂ ಸಂಗ್ರಹಿಸಿಟ್ಟಿದ್ದ ಫಲಗಳನ್ನು ನೀಡುತ್ತಾಳೆ. ರಾಮನು ಶಬರಿಯ ಯೋಗ ಸಿದ್ಧಿಯನ್ನು ಮನಸಾರೆ ಮೆಚ್ಚಿಹೊಗಳುತ್ತಾನೆ. ನಂತರ ಶಬರಿಯು ತನ್ನ ಕಾಯುವಿಕೆಯ ಉದ್ದೇಶ ಸಾಫಲ್ಯವಾಯಿತೆಂದು ಹೇಳುತ್ತಾ ದೇಹ ತ್ಯಾಗಮಾಡಲು ಬಯಸುತ್ತಾಳೆ. ಆಗ ರಾಮನು ಶಬರಿಯ ಮಾತುಗಳನ್ನು ಕೇಳಿ ಸಂತೋಷಪಟ್ಟು ಅವಳು ಇಚ್ಛಿಸಿದಂತೆ ಯಾವ ಲೋಕಕ್ಕಾದರೂ ಹೋಗಬಹುದು ಎಂದು ತಿಳಿಸಿ ಅವಳು ಇಷ್ಟಾರ್ಥವನ್ನು ಪೂರ್ತಿಮಾಡುತ್ತಾನೆ. ಇದಿಷ್ಟು ವಾಲ್ಮೀಕಿಯ ಶಬರಿ ಕಥೆ. ಇದರ ಆಧಾರದಿಂದ ಕುವೆಂಪುರವರು ತಮ್ಮ ದರ್ಶನ ತತ್ವದ ಮೂಲಕ ಶಬರಿಯ ತಪಸ್ಸಿಗೆ, ಸೇವೆಗೆ ಅತ್ಯುನ್ನತ ನೆಲೆಯನ್ನು ಕಟ್ಟಿಕೊಡುತ್ತಾರೆ. ಅವರ 'ದರ್ಶನ ತತ್ವದ' ವ್ಯಾಖ್ಯಾನ ಹೀಗಿದೆ.

"ದರ್ಶನ ಎಂಬ ಪದಕ್ಕೆ ಅಪರೋಕ್ಷವಾಗಿ ಅನುಭವಿಸಿ ಕಾಣುವುದು ಎಂದರ್ಥ. ಬುದ್ಧಿ, ಚಿಂತನ, ತರ್ಕ ಅಥವಾ ಅವರಿವರ ಹೇಳಿಕೆ ಇವು ಯಾವ ಉಪಾಧಿಗಳೂ ಇಲ್ಲದೆ ನೇರವಾಗಿ ಗ್ರಹಿಸುವ ಶಕ್ತಿ ದರ್ಶನ"[1]. ಶ್ರೀರಾಮಾಯಣದರ್ಶನಂ ಮಹಾಕಾವ್ಯದಲ್ಲಿ ಶಬರಿಯು ರಾಮನದರ್ಶನ ಭಾಗ್ಯದಿಂದ ತನ್ನತನವನ್ನೇ ಇಲ್ಲಗೈದು ರಾಮನಲ್ಲಿ ಲೀನವಾಗುತ್ತಾಳೆ. ಇದು ಅವಳ ಸೇವೆಯ ಪರಾಕಾಷ್ಠತೆಗೆ ದೊರೆತ ಪ್ರತಿಫಲವಾಗಿದೆ.

ಕುವೆಂಪುರವರ 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದಲ್ಲಿ ಶಬರಿ ಮತ್ತು ಶ್ರೀರಾಮನ ಸಂಬಂಧ ಅತ್ಯಂತ ವಾತ್ಸಲ್ಯದಿಂದ ಕೂಡಿದ್ದಾಗಿದೆ. ತಾಯಿ-ಮಗನ ಸಂಬಂಧದ ಭಾವುಕತೆ ಈ ಕಾವ್ಯದಲ್ಲಿ ಮಡುಗಟ್ಟಿ ನಿಲ್ಲುತ್ತದೆ.

*"ದಣಿದು ಬಂದಿಹೆವಜ್ಜಿ;*
*ಬಿಸಿಲಳುರುತಿದೆ; ಗುಡಿಸಲೊಳಗಿನಿತು ತಾವಿತ್ತು,*
*ತಿನಲಿತ್ತು, ಕರುಣೆ ಸೈ ನಿನ್ನ ಈ ಪರದೇಶಿ*
*ಕಂದರಂ ಚಿರಋಣಿಗಳು* [2]

ಇಲ್ಲಿ ವೃದ್ಧಿ ಶಬರಿಗೆ ಕುವೆಂಪುರವರು ಮಾತೃತ್ವದ ಸ್ಪರ್ಶವನ್ನು ನೀಡಿದ್ದಾರೆ.

ವಾಲ್ಮೀಕಿ ರಾಮಾಯಣದಂತೆ ಶಬರಿ ರಾಮನನ್ನು ನೋಡಿದೊಡನೆ ಗುರುತಿಸುವುದಿಲ್ಲ. ಲೌಕಿಕದ ಅಜ್ಞಾನದ ಪೊರೆ ಕ್ರಮೇಣ ಕಳಚಿದಾಗ ದೈವದ ಸಾಕ್ಷಾತ್ಕಾರವಾಗುತ್ತದೆ. ಶ್ರೀರಾಮನು ತನ್ನನ್ನು ಸಾಮಾನ್ಯನೆಂದು ಪರಿಚಯಿಸಿಕೊಳ್ಳುತ್ತಾನೆ. ಶಬರಿಯು ರಾಮನನ್ನು ಶಾಂತನಿಧಿ ಎಂದು ಹೇಳಿದಾಗ ರಾಮನು ಹೀಗೆ ನುಡಿಯುತ್ತಾನೆ

*"ಶಾಂತಿನಿಧಿಯಾ ತಂಗೆ*
*ಶಾಂತಿಯಿಲ್ಲದೆ ತೊಳಲುತಿಹನಲ್ತೆ? ಮನೆ ಬಿಟ್ಟು*
*ಹೇರಡವಿ ಮನೆಯಾದನಂ ಶಾಂತನಿಧಿಯೆಂದು*

*ಬಲಿದು ಬಣ್ಣಿಪೆಯೇಕೆ, ತಾಯಿ? ಸಾಮಾನ್ಯನಂ*
*ದೇವಮಾನ್ಯಂತೆತ್ತುದಜ್ಜೆ, ನಿನಳ್ಕರೂಪೆ!"* [4]

ನಂತರ ಮಾತೃಮಯಿ ಶಬರಿಯ ಗುಡಿಸಲಲ್ಲಿ ಸಂಪೂರ್ಣ ತೃಪ್ತ ಭಾವವನ್ನು ಹೊಂದಿ ನಿದ್ರಾವಶನಾಗಿ ಕನಸಿನಲ್ಲಿ ಹೀಗೆ ಕನವರಿಸುತ್ತಾನೆ:

*"ಕಾಕು ಕೂಗಿದನಳ್ಕಿಸರಿವಂತೆ ಶಬರಿ ! 'ನಿಲ್*
*ರಾಕ್ಷಸಾಧಮ, ನಿಲ್ ! ಪೇಳೆಲ್ಲಿಗುಯ್ಯುಪಯ್*
*ನನ್ನ ಸೀತೆ ನೆಲವೊ ನೀಚ!"*

ಈ ಮಾತುಗಳನ್ನು ಕೇಳಿ ಶಬರಿಗೆ ಇವನೇ ರಾಮನೆಂದು ತಿಳಿಯುತ್ತದೆ. ಅವನನ್ನು ಬಿಗಿದಪ್ಪಿ 'ದಮ್ಮಯ್ಯ ಸಾಕಿನ್ನು ಮರೆಮಾಡಬೇಡ, ಓ ನನ್ನ ಕಂದಯ್ಯ, ಹೇಳು ಸೀತೆ ಏನಾದಳೆಂದು' ಗೋಗರೆಯುತ್ತಾಳೆ. ಆಗ ಇದುವರೆಗೆ ಒಬ್ಬನೇ ಮನದಲ್ಲಿ ನೋವನ್ನು ಅನುಭವಿಸುತ್ತಿದ್ದವನು ಶಬರಿಯ ಸಾನಿಧ್ಯದಲ್ಲಿ ಒಂದು ರೀತಿಯ ಸುರಕ್ಷಿತ ಭಾವವನ್ನು ಅನುಭವಿಸುತ್ತಾನೆ.

ಈ ಸಂದರ್ಭದಲ್ಲಿ ರಾಮ ಒಂದು ವಿಚಿತ್ರರುಜೆಗೆ ತುತ್ತಾಗುತ್ತಾನೆ. ಶಬರಿ ಎಷ್ಟು ಸೇವೆ ಮಾಡಿದರೂ ರಾಮನು ಸುಸ್ಥಿತಿಗೆ ಮರಳುವುದಿಲ್ಲ. ಬದಲಾಗಿ ದಿನದಿನಕ್ಕೆ ಕೃಶವಾಗುತ್ತಿರುತ್ತಾನೆ. ಲಕ್ಷ್ಮಣನು ಅಣ್ಣನ ಸ್ಥಿತಿಯನ್ನು ಕಂಡು ದುಃಖಿಸುತ್ತಾನೆ. ಅದನ್ನು ಕಂಡ ಶಬರಿಗೆ ಕರುಳಿನ ಸಂಕಟ ಇನ್ನಷ್ಟು ಹೆಚ್ಚುತ್ತದೆ. ಅವಳು ಹೀಗೆ ಹೇಳುತ್ತಾಳೆ :

*"ಬಾ ಒಳಗೆ, ಬಿಡು ದುಃಖಮಂ*
*ಸೌಮಿತ್ರಿ, ನಿನ್ನಣ್ಣನುಸಿಂಗಾರಿ ಹೊಣೆಗಾರ್ತಿ*
*ನನ್ನ ಗುರುಕೃಪೆಯಿಂದ ರಾಮನ ರುಜೆಯೆನೆಲ್ಲಮಂ*
*ಹೀರಿ ಬಿಡುವೆ, ನೋಡು ಬಾ!"* [5]

ಎಂದು ಲಕ್ಷ್ಮಣನನ್ನು ಗುಡಿಸಲಿಗೆ ಕರೆದುಕೊಂಡು ಹೋಗುತ್ತಾಳೆ. ಅವನು ಸದೃಢನಾಗುತ್ತಾನೆಂದು ಹೇಳಿ ರಾಮನು ಮಲಗಿದ್ದ ಹಾಸುಗೆಯ ಸುತ್ತ ಪ್ರದಕ್ಷಿಣೆ ಹಾಕಿ ಅವನ ಪಾದಗಳಿಗೆ ಅಡ್ಡ ಬೀಳುತ್ತಾಳೆ. ಅರೆ ಕ್ಷಣದಲ್ಲೇ ರಾಮ ಆರೋಗ್ಯದಿಂದ ಎದ್ದುಕೂರುತ್ತಾನೆ. ಅವನ ಎಲ್ಲ ರೋಗವನ್ನು ಶಬರಿ ತನಗೆ ಆವಾಹಿಸಿಕೊಂಡಿರುತ್ತಾಳೆ. ಈ ಕಲ್ಪನೆ ಮಹತ್ವಪೂರ್ಣವಾದುದು. ಸೇವೆಗೆ ಇದಕ್ಕಿಂತ ಹೆಚ್ಚು ಇನ್ನೇನೂ ಮಾಡಲಾಗದೆಂಬುದಕ್ಕೆ ಶಬರಿಯ ಸೇವೆ ನಿದರ್ಶನವಾಗಿದೆ. ತನ್ನ ಗುರು ಬಲದಿಂದ ರಾಮನ ರುಜೆಯನ್ನು ತಾನು ಹೀರಿಕೊಂಡು ಬಿಡುತ್ತಾಳೆ. ರಾಮ ಲಕ್ಷ್ಮಣರು ಶಬರಿಯ ಸೇವೆಯನ್ನು ಮಾಡಹೊರಟಾಗ "ಬೆಳೆಯು ಎಳೆಯ ಹಸುರೆಲೆಗೆ ಶುಶ್ರೂಷೆ ಬೇಕೇ ಹೊರತು ಹಣ್ಣೆಲೆಗೇಕೆ ಉಪಚಾರ" ಎಂದು ಅವರನ್ನು ತಡೆಯುತ್ತಾಳೆ. ಹಾಗೂ ಅವರ ಮುಂದಿನ ಕಾರ್ಯವನ್ನು ನೆನಪಿಸುತ್ತಾಳೆ.

ಮುಂದೆ ಕಿಷ್ಕಿಂದೆಗೆ ಹೋಗಿ ಸುಗ್ರೀವನ ಸ್ನೇಹ ಮಾಡುವಂತೆ, ರಾಮನ ಮುಂದಿನ ಸುಖಕ್ಕಾಗಿ ದಾರಿಯನ್ನು ತೋರುತ್ತಾ ರಾಮಭಕ್ತೆ ಶಬರಿ ಕೊನೆಗೆ ರಾಮನ ದುಃಖಕ್ಕೂ ಭಾಗಿಯಾಗಿ ಅವನ ಮಡಿಲಲ್ಲೇ ಕಣ್ಮುಚ್ಚುತ್ತಾಳೆ. ಶಬರಿಯು ಅತ್ಯುನ್ನತ ಸೇವೆಯ ನೆಲೆಯಾಗಿ ಕಾಣಿಸಿಕೊಳ್ಳುತ್ತಾಳೆ. ತನ್ನ ಆರಾಧ್ಯದೈವಕ್ಕೆ ಇದಕ್ಕಿಂತ ಇನ್ನಾವ ಸೇವೆಯನ್ನು ಮಾಡಲಾರದ ಸೇವೆ ಎಂಬಂತೆ ರಕ್ಷೆಯಾಗಿ ಕೊನೆಗೆ ತನ್ನ ಅಸ್ತಿತ್ವವನ್ನು ರಾಮನಲ್ಲಿ ಒಂದಾಗಿಸುತ್ತಾಳೆ.

"ಶ್ರೀರಾಮನ ದಿವ್ಯದರ್ಶನ ಪಡೆದ ಶಬರಿಯ ಕಥೆ ಸಾಮಾನ್ಯರಿಗೆ, ಒಂದು ರಮ್ಯಕಥೆಯೋ, ಪುರಾಣ ಪುಣ್ಯ ಕಥೆಯೋ ಅಥವಾ ಐತಿಹ್ಯವೋ ಎಂಬಂತೆ ಕಂಡರೂ, ಅದರಲ್ಲಿ ವೈಜ್ಞಾನಿಕಾರ್ಥ ಹಾಗೂ ದಾರ್ಶನಿಕಾರ್ಥದ ಸತ್ಯ ಅಡಗಿದೆ. ವಾಯುಮಂಡಲದ ಒಂದು ಸ್ತರದಲ್ಲಿ ಆಕಾಶವಾಣಿಯಲ್ಲಿ ಧ್ವನಿ ತರಂಗಗಳನ್ನು ವಿದ್ಯುತ್ ತರಂಗಗಳನ್ನಾಗಿ ಮಾರ್ಪಡಿಸಿ ಹರಿಯಬಿಟ್ಟರೆ, ಅದೇ ಸ್ತರದಲ್ಲಿ ತೇಲುವ ವಿದ್ಯುತ್ ತರಂಗಗಳನ್ನು ಸ್ವೀಕರಿಸಿ, ಧ್ವನಿ ತರಂಗಗಳನ್ನಾಗಿ ರೂಪಿಸುವ ರೇಡಿಯೋ ಹೇಗೋ ಹಾಗೇ ಸಮಾನತೆಯ ಒಲವುಳ್ಳ ಅಂತರಾತ್ಮಗಳು ಪ್ರತಿಧ್ವನಿಸುತ್ತವೆ, ಪ್ರತಿಕ್ರಿಯಿಸುತ್ತವೆ, ಪ್ರತಿಬಿಂಬಿಸುತ್ತವೆ. ಇದು ವೈಜ್ಞಾನಿಕ ಸತ್ಯ" ಎಂದು ಪ್ರೊ॥ ಆರ್. ಡಿ.ಜಿ. ರವರು ತಿಳಿಸುತ್ತಾರೆ. ಆಧ್ಯಾತ್ಮಿಕವಾಗಿ ದಾರ್ಶನಿಕ ಸತ್ಯ ಅಡಗಿರುವುದನ್ನು ಶಬರಿಯ ಕಥೆಯ ಮೂಲಕ ಗ್ರಹಿಸಬಹುದಾಗಿದೆ. ಹೀಗೆ ಕುವೆಂಪುರವರು ಶಬರಿಗೆ ದರ್ಶನದ ಮಹತ್ವವನ್ನು ನೀಡಿದ್ದಾರೆ.

## ಅಡಿ ಟಿಪ್ಪಣಿ

1. ತಪೋನಂದನ, ಕುವೆಂಪು, ಉದಯರವಿ ಪ್ರಕಾಶನ. ಮೈಸೂರು, ಪು. 100
2. ಶ್ರೀ ರಾಮಾಯಣ ದರ್ಶನಂ, ಕಿಷ್ಕಿಂದಾ ಸಂಪುಟ, ಪು. 267
3. ಅದೇ, ಪು. 267
4. ಅದೇ, ಪು. 274
5. ಅದೇ, ಪು. 226
6. ಗಂಗೋತ್ರಿ, ಗೀತಾಬುಕ್ ಹೌಸ್, ಮೈಸೂರು

# ಸಮಾರೋಪ

ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯವನ್ನು ಇದುವರೆಗೂ ಸ್ತ್ರೀ ಕೇಂದ್ರಿತ ಮನೋನೆಲೆಗಳಲ್ಲಿ ಇಲ್ಲಿನ ಸ್ತ್ರೀ ಪಾತ್ರಗಳನ್ನು ಪರಿಶಿಲಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಇಲ್ಲಿನ ಪುರಾಣದ ವಸ್ತು ಹಾಗೂ ಪುರಾಣ ಪ್ರತಿಮೆಗಳನ್ನು ಸಮಕಾಲೀನ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ನೋಡಿರುವುದನ್ನು, ಹಾಗೂ ಪುನರ್ ಪರಿಶಿಲಿಸಿರುವುದನ್ನು ಹಾಗೂ ಪುನರ್ ಸ್ಥಾಪಿಸಿರುವುದನ್ನು ಇಲ್ಲಿ ನೋಡಲಾಗಿದೆ. ಭಾರತೀಯ ಪರಂಪರೆ ಮತ್ತು ಆಧುನಿಕತೆ, ವಸಾಹತುಶಾಹಿ ಹಾಗೂ ಅನಂತರದ ಸಾಮಾಜಿಕ ಸ್ಥಿತ್ಯಂತರಗಳು, ರಾಷ್ಟ್ರೀಯತೆ, ಭಾರತಾಂಬೆ, ಭೂಮಿ ಪ್ರತೀಕ, ಮೊದಲಾದ ಪರಿಕಲ್ಪನೆಗಳು ಕುವೆಂಪುರವರ ಸ್ತ್ರೀ ಸಂವೇದನೆಗೆ ಹಿನ್ನೆಲೆಯಾಗಿದ್ದವೆಂಬುದನ್ನು ಗುರುತಿಸಲಾಗಿದೆ. ಹಾಗೆಯೇ ಗಾಂಧೀಜಿಯವರ ತಾತ್ವಿಕ ಸಿದ್ಧಾಂತಗಳ ಮಾದರಿ, ಅವರ ಅರ್ಧನಾರೀಶ್ವರ ಕಲ್ಪನೆ, ಆಧ್ಯಾತ್ಮ, ಆದರ್ಶ ಸಮಾಜದ ಕಲ್ಪನೆ, ರಾಮರಾಜ್ಯದ ಕಲ್ಪನೆ ಇವೇ ಮೊದಲಾದ ಅಂಶಗಳು ಕುವೆಂಪುರವರ ಸ್ತ್ರೀಪರ ಧೋರಣೆಗೆ ಹಿನ್ನೆಲೆಯಾಗಿದ್ದು, ಹೇಗೆ ಪ್ರಭಾವಿಸಿವೆ ಎಂಬುದನ್ನು ಇಲ್ಲಿ ಗುರುತಿಸಲಾಗಿದೆ. ಮಾನವತಾವಾದ, ಸಮತಾವಾದ, ನಿರಂಕುಶಮತಿತ್ವ, ಮಾನವೀಯತೆಯ ಆಶಯಗಳು, ಜೀವಪರವಾದ ಚಿಂತನೆಗಳು, ಪರಿಸರಕಾಳಜಿ ಹಾಗೂ ಸಮಕಾಲೀನ ಪ್ರಜ್ಞೆ ಈ ಮೊದಲಾದ ಚಿಂತನೆಗಳು ಸ್ತ್ರೀ ಮನೋನೆಲೆಗಳ ಮೇಲೆ ಹೇಗೆ ಪ್ರಭಾವಿಸಿವೆ ಎಂಬುದನ್ನು ಈಕಾವ್ಯದ ಹಿನ್ನೆಲೆಯಲ್ಲಿ ಪರಿಶೀಲಿಸಲಾಗಿದೆ. ಪ್ರೀತಿ, ಪ್ರೇಮ, ತ್ಯಾಗ, ಸ್ನೇಹ, ಸೌಹಾರ್ದತೆ, ಆದರ್ಶ, ದಾರ್ಶನಿಕತೆಯಂತಹ ಮೌಲ್ಯಗಳ ಹಿನ್ನೆಲೆಯಲ್ಲಿ ಸ್ತ್ರೀ ಪರವಾದ ಸಂವೇದನೆಯನ್ನು ಹಾಗೂ ಸಾಮಾಜಿಕ ಕಾಳಜಿಯನ್ನು ಕಾಣಬಹುದಾಗಿದೆ. ಪ್ರಕೃತಿ–ದೇವರು–ಧರ್ಮ–ಆಧ್ಯಾತ್ಮದ ಕುರಿತು ಒಲವನ್ನು ಮೂಡಿಸುವುದು ಗಂಡು–ಹೆಣ್ಣಿನ ಸಂಬಂಧ ಕುರಿತು ವಿವೇಚಿಸುವುದು, ಸ್ತ್ರೀ ಸ್ವಾತಂತ್ರ್ಯವನ್ನು ಬಯಸುವುದು ಮೊದಲಾದ ಚಿತ್ರಣಗಳು ಇಲ್ಲಿ ಅಭಿವ್ಯಕ್ತಗೊಂಡಿವೆ.

ರಾಮಾಯಣದ ಸ್ತ್ರೀ ಪಾತ್ರಗಳನ್ನು ಅವರ ಪಾರಂಪರಿಕ ಚೌಕಟ್ಟುಗಳಿಂದ ಬಿಡುಗಡೆಗೊಳಿಸಿ, ಆ ಮೂಲಕ ತಮ್ಮ ಆಧುನಿಕ ಸಂವೇದನೆಯನ್ನು ಬಿಂಬಿಸುವ ಪ್ರಯತ್ನವನ್ನು ಮಾಡಿರುವುದನ್ನು ಇಲ್ಲಿ ಗುರುತಿಸಲಾಗಿದೆ. ಇಲ್ಲಿ ಸೀತೆ, ಅಹಲ್ಯೆ, ಮಂಥರೆ, ಮಂಡೋದರಿ, ಕೈಕೆ ಮೊದಲಾದವರ ವರ್ತನೆಗಳನ್ನು ಪ್ರಶ್ನಿಸಲಾಗಿದೆ. ಇಲ್ಲಿ ಸ್ತ್ರೀಯರ ಅಭಿವ್ಯಕ್ತಿಯ ತಳಹದಿಯಾಗಿರುವ ಪ್ರೀತಿ, ತ್ಯಾಗ, ಆಧ್ಯಾತ್ಮ, ತಪಸ್ಸು, ಮೌನವ್ರತ ಮೊದಲಾದ ಮೌಲ್ಯಗಳ ಮೂಲಕ ಎಲ್ಲಾ ವಿಧವಾದ ಯಾಜಮಾನ್ಯಗಳ ನಿರಾಕರಣೆ ಹಾಗೂ ಸ್ವಂತಿಕೆಯ ಸ್ಥಾಪನೆಯನ್ನು ಇಲ್ಲಿ ಕಾಣುತ್ತೇವೆ. ಪುರುಷ ನಿರ್ಮಿತ ಹಾಗೂ ಅಧಿಕಾರ ನಿರ್ಮಿತ ಸವಾಲುಗಳನ್ನು ಎದುರಿಸುತ್ತ ತಮ್ಮ ನಿಜವಾದ ಸ್ವರೂಪಗಳ ಶೋಧನೆಗೆ ಹೊರಡುವ ಆ ಪ್ರಕ್ರಿಯೆಯಲ್ಲಿ ತಮ್ಮ ಹೊಸ ಅಸ್ತಿತ್ವವನ್ನು ಕಟ್ಟಿಕೊಳ್ಳುತ್ತಾ, ಸ್ತ್ರೀ ಕೇಂದ್ರಗಳನ್ನು ಸ್ಥಾಪಿಸುತ್ತಾ ಹೋಗುವ ಸ್ತ್ರೀ ಶಕ್ತಿಕೇಂದ್ರಗಳ ವಿಶಿಷ್ಟಾಂಶಗಳನ್ನು ಇಲ್ಲಿ ಗುರುತಿಸಿದೆ.

ಕುವೆಂಪುರವರಿಗೆ ರಾಜಪ್ರಭುತ್ವ, ವಂಶಾಡಳಿತ ಪ್ರಭುತ್ವ, ಪುರೋಹಿತಶಾಹಿ ಪ್ರಭುತ್ವ, ಧರ್ಮ, ಜಾತಿ ಮೊದಲಾದ ಅಧಿಕಾರ ಕೇಂದ್ರಗಳ ಬಗ್ಗೆ ವಿರೋಧವಿತ್ತು.

ಆರ್ಯ-ಅನಾರ್ಯ, ಪರಂಪರೆ - ಆಧುನಿಕತೆ, ಹೆಣ್ಣು-ಗಂಡು, ಪ್ರಕೃತಿ-ಪುರುಷ ಇವುಗಳ ನಡುವಿನ ವೈರುಧ್ಯಗಳನ್ನು ಪ್ರಶ್ನಿಸಿದ್ದರು. ಆದಕಾರಣ ಇವುಗಳ ನಡುವಿನ ಭಿನ್ನತೆಯನ್ನು ಮುರಿಯಲು, ಎಲ್ಲಾ ಬಗೆಯ ಯಾಜಮಾನ್ಯವನ್ನು ಪಲ್ಲಟಗೊಳಿಸುವ ಉದ್ದೇಶದಿಂದ ಕೈಕೆ, ಮಂಥರೆ ಯಂಥ ಪಾತ್ರಗಳನ್ನು ಚಿತ್ರಿಸಿದಂತೆ ತೋರುತ್ತದೆ. ಈ ಪಾತ್ರಗಳು ಹೇಗೆ ಇಡೀ ಅರಮನೆಯ ವಾತಾವರಣವನ್ನು ಕಲುಷಿತಗೊಳಿಸಿಬಿಡುತ್ತವೆ, ಹಾಗೂ ವಂಶಾಡಳಿತ ಪುರುಷಾಧಿಕಾರಿ ಪ್ರಭುತ್ವವನ್ನು ಹೇಗೆ ಪಲ್ಲಟಗೊಳಿಸಿಬಿಡುತ್ತವೆ ಎಂಬುದನ್ನು ಇಲ್ಲಿ ಚಿತ್ರಿಸಿದ್ದಾರೆ.

ರಾವಣ-ಮಂಡೋದರಿ, ರಾವಣ-ಸೀತೆ, ರಾಮ-ಸೀತೆ, ಗೌತಮ-ಅಹಲ್ಯೆ, ಲಕ್ಷ್ಮಣ-ಊರ್ಮಿಳೆ ಮೊದಲಾದ ಹೆಣ್ಣು-ಗಂಡಿನ ಸಂಬಂಧಗಳಲ್ಲಿನ ಲಿಂಗರಾಜಕಾರಣ ಹಾಗೂ ಜೀವವಿರೋಧಿ ನಿಲುವುಗಳನ್ನು ಮುರಿದು ಜೀವಪರವಾದ, ಸ್ತ್ರೀಪರವಾದ, ಹಾಗೂ ತಾಯ್ತನದ ಸಂಬಂಧಗಳಂಥ ನಿಲುವುಗಳನ್ನು ಈ ಕಾವ್ಯದಲ್ಲಿ ಕುವೆಂಪು ಪ್ರಕಟಿಸಿದ್ದಾರೆ. ಇಲ್ಲಿಯ ಪ್ರತಿಯೊಂದು ಪುರುಷ ಪಾತ್ರಗಳನ್ನು ಪುನರ್ ವಿಮರ್ಶೆಗೆ, ಆತ್ಮಪರಿಶೋಧನೆಗೆ, ಪ್ರಾಯಶ್ಚಿತ್ತ ಚಿಕಿತ್ಸೆಗೆ ಒಳಪಡಿಸಿ, ಲಿಂಗಸಮಾನತೆಯ ನಿಲುವುಗಳನ್ನು ಪ್ರಕಟಿಸಿದ್ದಾರೆ. ಲಿಂಗ ಸಂಬಂಧ, ಪ್ರಕೃತಿ ಪುರುಷನ ಸಂಬಂಧ, ಮನುಷ್ಯ ಸಂಬಂಧಗಳನ್ನು ಪುನರ್ ರೂಪಿಸಲಾಗಿದೆ. ಪ್ರತಿಯೊಂದು ಸ್ತ್ರೀ ಪಾತ್ರಗಳೂ ತಮ್ಮದೇ ಆದ ಹೊಸ ಅಸ್ತಿತ್ವವನ್ನು ಹಾಗೂ ಚಹರೆಗಳನ್ನು ಸ್ಥಾಪಿಸಿಕೊಳ್ಳುವುದರ ಮೂಲಕ ಸ್ತ್ರೀ ಶಕ್ತಿ ಕೇಂದ್ರಗಳಾಗಿ ರೂಪಪಡೆಯುತ್ತವೆ. 'ಶಿಲಾತಪಸ್ವಿನಿ' ಭಾಗದಲ್ಲಿ ಆಶ್ರಮದಂಥ ಆಧ್ಯಾತ್ಮಿಕ, ಕೌಟುಂಬಿಕ ಹಾಗೂ ಜ್ಞಾನಕೇಂದ್ರಗಳನ್ನು ಪುನರುತ್ಥಾನಗೊಳಿಸಲಾಗಿದೆ. ಸ್ತ್ರೀತ್ವದ ಮೂಲಕ ಪ್ರಬಲ ಪುರುಷಾಧಿಕಾರವನ್ನು ಮಣಿಸಿದ ಹಾಗೂ ಪರಿವರ್ತಿಸಿದ ರಾವಣ ಮತ್ತು ಸೀತೆಯರ ಸನ್ನಿವೇಶ ಈ ಕಾವ್ಯದಲ್ಲಿ ಅತ್ಯಂತ ಮಹತ್ವದ್ದಾಗಿದೆ. ಪ್ರೀತಿ, ಆದರ್ಶ, ಮಾನವೀಯತೆ, ಜೀವಪರವಾದ, ಧೋರಣೆ, ಆತ್ಮಾವಲೋಕನ, ಆತ್ಮವಿಮರ್ಶೆ, ಮನಃಪರಿವರ್ತನೆ ಮೊದಲಾದ ಗಾಂಧೀಜಿಯವರ ಆಶಯಗಳನ್ನು ಈ ಕಾವ್ಯ ಎತ್ತಿ ಹಿಡಿಯುತ್ತದೆ. 'ಯಾರೂ ಮುಖ್ಯರಲ್ಲ, ಯಾರೂ ಅಮುಖ್ಯರಲ್ಲ, ಯಾವುದೂ ಯಃಕಶ್ಚಿತವಲ್ಲ!' ಎಂಬ ಕುವೆಂಪುರವರ ಈ ಸ್ತ್ರೀ ಪುರುಷರ ಸಮಾನತೆಯ ತಾತ್ವಿಕ ಚಿಂತನೆಯು ಈ ಕಾವ್ಯದಲ್ಲಿ ಅನಾವರಣಗೊಂಡಿದೆ. ಒಟ್ಟಿನಲ್ಲಿ ಮಾನವತ್ವದ ಸರ್ವಾಂಗೀಣ ವಿಕಾಸ ಈ ಕಾವ್ಯದ ಮುಖ್ಯ ಧೋರಣೆಯಾಗಿರುವುದನ್ನು ಇಲ್ಲಿ ಗುರುತಿಸಲಾಗಿದೆ.

ಪಿತೃಪ್ರಾಧಾನ್ಯವನ್ನು ತಿರಸ್ಕರಿಸಿ ಮಹಿಳೆಯರದೇ ಆದ ಬೌದ್ಧಿಕ ಮತ್ತು ನೈತಿಕ ಮಹತ್ವಾಕಾಂಕ್ಷೆಗಳ ಸಾಧನೆಗೆ ಕುವೆಂಪುರವರು ಇಲ್ಲ ಪ್ರೇರಣೆ ನೀಡಿದ್ದಾರೆ. ಮಹಿಳೆಯರದೇ ಆದ ಅನುಭವ ಲೋಕವೊಂದನ್ನು ಸೃಷ್ಟಿಸುತ್ತಾ ಅಲ್ಲಿ ಮಹಿಳೆಯ ಅಧಿಕಾರ, ಜ್ಞಾನ, ಆಧ್ಯಾತ್ಮಗಳು ಸ್ವಯಂ ಸ್ವೀಕೃತವಾಗುವುದನ್ನು ಇಲ್ಲಿ ದಾಖಲಿಸುತ್ತಾರೆ. ಹೆಣ್ಣಿನ ನೆಲೆಯಿಂದ ಪುರಾಣದ ಮರುಶೋಧನೆಗೆ ಹೊರಟಿರುವುದು ಈ ಕಾವ್ಯದ ಮತ್ತೊಂದು ವಿಶಿಷ್ಟ ಅಂಶವಾಗಿದೆ. ಭಾರತೀಯ ಸ್ತ್ರೀ ಪರಂಪರೆಯ ವಿಶಿಷ್ಟರೂಪದ ಕಡೆಗೆ ಅನೇಕ ಒಳನೋಟಗಳನ್ನು ಈ ಕೃತಿಯಲ್ಲಿ ಕುವೆಂಪು ಒದಗಿಸಿದ್ದಾರೆ. ಪಿತೃರೂಪಿ ಸಂಸ್ಕೃತಿಯನ್ನು ಹಾಗೂ ಪಾರಂಪರಿಕ ರಾಜತ್ವದ ಕಲ್ಪನೆಯನ್ನು ಭೇದಿಸುವುದು, ವ್ಯವಸ್ಥೆಯನ್ನು ಪ್ರಶ್ನಿಸುವುದು ಮತ್ತು ಹಠಮಾರಿತನದಿಂದ ಎಲ್ಲವನ್ನು ಪಡೆದುಕೊಳ್ಳಬೇಕೆನ್ನುವ ಸ್ತ್ರೀತ್ವದ ಮಾದರಿಗಳನ್ನು ಈ

ಕಾವ್ಯದಲ್ಲಿ ಕಂಡುಕೊಳ್ಳಬಹುದಾಗಿದೆ. ಈ ಸೆಣೆಸಾಟವು ಒಂದು ರೀತಿಯ ಸ್ವಾತಂತ್ರ್ಯ, ಸಮಾನತೆ, ಅಸ್ತಿತ್ವ, ಚಹರೆಗಳನ್ನು ಸ್ಥಾಪಿಸಿಕೊಳ್ಳಬೇಕೆನ್ನುವ ಆಶಯಗಳನ್ನು ಹೊಂದಿದ್ದಾಗಿದೆ. 'ಶ್ರೀರಾಮಾಯಣ ದರ್ಶನಂ' ಕಾವ್ಯದಲ್ಲಿ 'ಸ್ತ್ರೀ ರಾಜಕಾರಣದ ನೆಲೆಗಳು' ಎಂಬ ವಿಷಯವನ್ನು ಆಧಾರವಾಗಿಟ್ಟುಕೊಂಡು ಹೊಸ ಓದಿನ ಮೂಲಕ ವಿಸ್ತೃತ ಅಧ್ಯಯನದವನ್ನು ಮಾಡಬಹುದಾಗಿದೆ.

ಸ್ತ್ರೀ ಪುರುಷರ ಆದರ್ಶ ಸಂಬಂಧದ ಮೂಲಕ, ಪ್ರಭುತ್ವ ಮತ್ತು ಮಾನವೀಕರಣ ಹಾಗೂ ಲೌಕಿಕ ಮತ್ತು ಆಧ್ಯಾತ್ಮ ಇವುಗಳ ನಡುವಿನ ಆರೋಗ್ಯಪೂರ್ಣ ಅನುಸಂಧಾನಗಳ ಮೂಲಕ ಆದರ್ಶ ಸಂಸ್ಕೃತಿಯೊಂದನ್ನು ಕಟ್ಟಬಹುದಾದ ಕುವೆಂಪುರವರ ದಾರ್ಶನಿಕ ಚಿಂತನೆಯ ಆಶಯಗಳನ್ನು 'ಶ್ರೀ ರಾಮಾಯಣ ದರ್ಶನಂ ಕಾವ್ಯದ ಸ್ತ್ರೀಯರ ಮನೋನೆಲೆಗಳು' ಎಂಬ ಶೀರ್ಷಿಕೆಯುಳ್ಳ ಈ ಅಧ್ಯಯನ ಗುರುತಿಸಲು ಯತ್ನಿಸಿದೆ.

## ಪರಾಮರ್ಶನ ಗ್ರಂಥಗಳು

1. ಸ್ತ್ರೀವಾದ ಮತ್ತು ರಾಜಕಾರಣ, ಕೇಶವ ಶರ್ಮ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪೆ, 2000
2. ವಿಚಾರ ಸಾಹಿತ್ಯ, ಸಂ. ಡಾ॥ ಟಿ. ಎಸ್. ವೆಂಕಣ್ಣ, ಪ್ರೊ ॥ ಎಸ್. ನರಹರಿ ಪ್ರಸಾರಂಗ, ಬೆಂಗಳೂರು ವಿ.ವಿ, ಬೆಂಗಳೂರು.
3. ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು ಡಾ॥ ಎಂ. ಉಷಾ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪೆ, 2004
4. ಮಹಿಳೆ ಸಮಾಜ ಮತ್ತು ಸಂಸ್ಕೃತಿ ಡಾ ॥ ಆರ್. ಇಂದಿರಾ ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪೆ, 2002
5. ಶಬ್ದರೇಖೆ, ಕೇಶವ ಶರ್ಮ, ಅಭಿನವ, ಬೆಂಗಳೂರು 1998
6. ಪಶ್ಚಿಮದ ಸ್ತ್ರೀವಾದಿ ವಿಮರ್ಶಾ ಪಂಥಗಳು, ಡಾ॥ ಬಿ.ಎನ್. ಸುಮಿತ್ರಾಬಾಯಿ, ಕನ್ನಡ ವಿ. ವಿ.. ಹಂಪೆ, 2002
7. ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ, ಡಾ॥ ಎಂ. ಉಷಾ, ಕನ್ನಡ ವಿಶ್ವವಿದ್ಯಾಲಯ, ಹಂಪೆ, 2001.
8. ಶ್ರೀ ರಾಮಾಯಣ ದರ್ಶನಂ ಪಾತ್ರಲೋಕ, ಡಾ॥ ಎಚ್.ಕೆ.ಲಕ್ಕಪ್ಪಗೌಡ, ಪವನಜ ಪ್ರಕಾಶನ, ಬೆಂಗಳೂರು, 2006.
9. ಕುವೆಂಪು ಸಾಹಿತ್ಯ : ಕುವೆಂಪು ಸಂಸ್ಕೃತಿ ಚಿಂತನೆ, ಸಂ. ಶ್ರೀ ಎಂ. ಶಂಭುಲಿಂಗ, ಶ್ರೀ ಶ್ರೀನಿವಾಸ ಯುವರಾಜ ಕಾಲೇಜು, ಮೈಸೂರು, 2005.
10. ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯ ಸಮೀಕ್ಷೆ, ಕೊ. ಚೆನ್ನಬಸಪ್ಪ ,ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು 1999
11. ಹಾಡೆ ಹಾದಿಯ ತೋರಿತು,ಎಚ್.ಎಸ್. ರಾಘವೇಂದ್ರರಾವ್, ಕ್ರೈಸ್ಟ್ ಕಾಲೇಜು, ಬೆಂಗಳೂರು, 1995.
12. ಶ್ರೀ ಕುವೆಂಪು ಸ್ತ್ರೀವಾದಿ ಚಿಂತನೆ, ಡಾ॥ ವಿಜಯ ಮೊಳೆಯಾರ, ಸಿ.ವಿ.ಜಿ. ಪ್ರಕಾಶನ, ಬೆಂಗಳೂರು –2004
13. ಶಕ್ತಿ ಶಾರದೆಯ ಮೇಳ, ಡಿ.ಆರ್. ನಾಗರಾಜ್, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, 2002
14. ಕುವೆಂಪು: ಪುನರ್ಮನನ, ಸಂ. ಪ್ರೊ ॥ ಬೈರಪ್ಪ, ಪ್ರೊ॥ ಅರವಿಂದಮಾಲಗತ್ತಿ , ಮೈಸೂರು ವಿ. ವಿ., 2004.
15. ಓದುವ ದಾರಿಗಳು, ಸಂ. ಗಿರಡ್ಡಿ ಗೋವಿಂದರಾಜು, ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು, 2002.
16. ಕುವೆಂಪು ಪುನರಾವಲೋಕನ, ಜಿ.ಎಸ್. ಶಿವರುದ್ರಪ್ಪ,ಲಕ್ಷ್ಮಿ ಮುದ್ರಣಾಲಯ ಬೆಂಗಳೂರು, 2005.
17. ಕುವೆಂಪು ಕಥನ, ಡಾ॥ ಉದ್ದಂಡಯ್ಯ ಅಧ್ಯಯನ ಮಂಡಲ, ಬೆಂಗಳೂರು, 2004
18. ರಾಜಕಾರಣದಲ್ಲಿ ಮಹಿಳೆ, ಡಾ॥ ಎಂ.ಎ. ಸಿಂಗಮ್ಮಾಳ್, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು 2002